ಪಾರಿಶನಾಥ ದೇವೇಂದ್ರ ಉಪಾಧ್ಯೆ ಆಲಗೂರ

ಸ್ವಸ್ತಿಶ್ರೀ ೧೦೫ ಅತಿಬಲ ಗ್ರಂಥಮಾಲಾ ಪುಷ್ಪ ೮೧

# ಜೀವಂಧರ



ಲೇಖಕರು :

ಶ್ರೀ. ಎದುರ್ಕಳ ಶಂಭುಭಟ್ಟರು, ವಿದ್ವಾನ್.

ಮಂಗಳೂರು.



೧೯೭೨

[ ಕ್ರಯ ೧-೦೦ ]



ಜಯಕೀರ್ತಿ ಅಕ್ಕಲಕೋಟೆ. ‡ ಅತಿಬಲಮಹಾರಾಜರು.

# ಮುನ್ನುಡಿ

ಜೀವಂಧರನ ತಂದೆ ಸತ್ಯಂಧರ ಮಹಾರಾಜನು "ಹೇಮಾಂಗದ" ಎಂಬ ದೇಶದ ಮಹಾರಾಜನು. ಹೆಸರಿಗೆ ತಕ್ಕಂತೆ ಸತ್ಯಶೀಲನು, ಪ್ರಾಜ್ಞನು, ಆದರೂ ವಿಷಯಾಸಕ್ತಿಗೊಳಗಾದವನು. ಆತನು ಧರ್ಮಾರ್ಥ ಕಾಮಗಳಲ್ಲಿ ಮೂಲ ಗುಣವಾದ ಧರ್ಮವನ್ನೇ ಮರೆತನು.

ಜೀವಂಧರನು ಪುಣ್ಯಶಾಲಿಯು. ಬಾಲ್ಯದಿಂದಲೇ ಆತನಲ್ಲಿ ಮಹಾಮಹಿಮರ ಚಿಹ್ನೆಗಳು ಗೋಚರಿಸತೊಡಗಿದವು ಆತನು ಶಾಸ್ತ್ರಸಂಪನ್ನನು, ಭಾಗ್ಯಶಾಲಿಯು. ಆದರೆ ಆತನು ಹಿಂದಿನ ಜನ್ಮದಲ್ಲಿ ೧೬ ದಿನ ಹಂಸಪಕ್ಷಿಯ ಮರಿಯನ್ನು ಅದರ ಮಾತಾಪಿತೃಗಳಿಂದ ಅಗಲಿಸಿದ್ದರಿಂದ, ಹದಿನಾರು ಸಂವತ್ಸರಗಳ ಕಾಲ ಮಾತಾಪಿತೃವಿಯೋಗವೂ ರಾಜ್ಯಭ್ರಷ್ಟತೆಯೂ ಪ್ರಾಪ್ತವಾದವು.

ಆದರೆ ಮುಂದೆ ರಾಜ್ಯಸೂತ್ರಗಳನ್ನು ವಹಿಸಿಕೊಂಡಂದಿನಿಂದ ಜೀವಂಧರನು ಪ್ರಜೆಗಳನ್ನು ಮಕ್ಕಳೋಪಾದಿಯಲ್ಲಿ ಕಾಪಾಡುತ್ತಿದ್ದನು. ಪ್ರಜೆಗಳ ಸಂಪತ್ಸಮೃದ್ಧಿಯಿಂದ ಸಂತೋಷಪಡುತ್ತಿದ್ದನು. ಹೀಗೆ ೩೦ ವರ್ಷ ಧರ್ಮದಿಂದ ರಾಜ್ಯವಾಳಿ, ಸಾರ್ವಭೌಮನಾಗಿ ಮೆರೆದನು.

ಒಂದುದಿನ ಅವನು ಜಲಕ್ರೀಡಾದರ್ಶನೋತ್ಸುಕನಾಗಿ ನದೀತೀರಕ್ಕೆ ಹೋದಾಗ್ಗೆ, ಅಲ್ಲಿ ದೇವತೆಗಳಿಗಾಗಿ ನೈವೇದ್ಯವಿಟ್ಟಿದ್ದ ಹವಿಸ್ಸನ್ನು ಮುಟ್ಟಿತೆಂದು ಬ್ರಾಹ್ಮಣರು ಹೊಡೆದು ಕೆಡೆವಿದ ನಾಯಿಯು ನರಳಾಡುವದನ್ನು, ಕಂಡು ದಯೆಯಿಂದ ಅದನ್ನು ಉಪಚರಿಸಿದನು. ಬದುಕಿಸಲು ಯತ್ನಿಸಿದರೂ ಉಪಯೋಗವಾಗಲಿಲ್ಲ. ಅದಕ್ಕೆ ಯೋಗ್ಯಭವವು ಸಿದ್ಧಿಸಲೆಂದು, ಮರಣಕಾಲದಲ್ಲಿ ಪಂಚಪರಮೇಷ್ಠಿಗಳ ಮಂತ್ರಗಳನ್ನು ಉಪದೇಶಿಸಿದನು. ಮಂತ್ರ ಪ್ರಭಾವದಿಂದ ಆ ನಾಯಿಯು ಯಕ್ಷರಾಜನಾಗಿ ಪುನರ್ಜನ್ಮವನ್ನು ಹೊಂದಿತು. ಪೂರ್ವೋಪಕಾರ ಸ್ಮರಣೆಯುಳ್ಳ ಯಕ್ಷರಾಜನು ಜೀವಂಧರನನ್ನು ಬಹಳವಾಗಿ ಸ್ತುತಿಸಿ "ಅವಶ್ಯಬಿದ್ದಾಗ ನನ್ನನ್ನು ಸ್ಮರಿಸು" ಎಂದು ನುಡಿದು ಹೊರಟು ಹೋದನು. ಈ ಪ್ರಕಾರ ಜೀವಂಧರನು ಸಕಲ ಪ್ರಾಣಿಗಳಲ್ಲಿ ದಯೆಯುಳ್ಳವನಾಗಿದ್ದನು. ಅಶಕ್ತ ಪ್ರಾಣಿಗಳ ಮೇಲೆ ದಯೆತೋರುವುದು ದೇವರ ಪ್ರಾರ್ಥನೆಯ ಮಾರ್ಗವಾಗಿದೆ. ಅಜ್ಞಾನಿಗಳಿಗೆ ಜ್ಞಾನ ಬಡವರಿಗೆ ದ್ರವ್ಯ, ರೋಗಿಗಳಿಗೆ ಔಷಧ, ನಿರಾಧಾರಿಗಳಿಗೂ ಹಸಿವಾದವರಿಗೂ ಅನ್ನ ಕೊಡುವುದು ಇವುಗಳಲ್ಲಿ ಜನರು ಸಂತೋಷಹೊಂದಬೇಕು. ದಯೆಯೇ ಧರ್ಮದ ಮೂಲವಾಗಿದೆ. ಸರ್ವಧರ್ಮಗಳ ಸಾರವಾಗಿದೆ.

ಜೀವಂಧರನು ಕೊನೆಗೆ ವೈರಾಗ್ಯಭಾವವನ್ನು ತಾಳಿ, ರತ್ನತ್ರಯದ ಪೂರ್ತಿಯಿಂದ ತಪಸ್ಸನ್ನಾಚರಿಸಿ ಸಕಲ ಕರ್ಮಕ್ಷಯವನ್ನು ಹೊಂದಿ, ನಿರ್ಮಲನಾಗಿ, ನಿತ್ಯನಿರತಿಶಯ ಸುಖಸ್ವರೂಪವಾದ ಮೋಕ್ಷಶ್ರೀಯನ್ನು ಪಡೆದನು.

ಈ ಜೀವಂಧರ ಚರಿತೆಯು ಬಾಲಕರಿಗೂ, ತರುಣರಿಗೂ, ವೃದ್ಧರಿಗೂ ಸರ್ವರಿಗೂ ಮಾರ್ಗದರ್ಶಿಯಾಗಿದೆ. ಇದು ಸುಲಭ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಕತೆಯನ್ನು ಓದಲು ಪ್ರಾರಂಭಿಸಿದೆವೆಂದರೆ, ಅದನ್ನು ಮುಗಿಸುವವರೆಗೆ ವಿಶ್ರಮಿಸಲು ಮನಸ್ಸಾಗುವದಿಲ್ಲ. ಗೀರ್ವಾಣಭಾಷಾ ಕವಿಪುಂಗವನಾದ "ವಾರೀಭಸಿಂಹ ಸೂರಿಯ ನಕ್ಷತ್ರಚೂಡಾಮಣಿ" ಎಂಬ ಸಂಸ್ಕೃತ ಕಾವ್ಯದ ಸಂಗ್ರಹಾನುರೂಪವಾಗಿ ಇದನ್ನು ಲೇಖಕರು ತಯಾರಿಸಿರುತ್ತಾರೆ. ಈ ಕತೆಯಲ್ಲಿ ಆಗಾಗ್ಗೆ ಸಂಸ್ಕೃತ ಶ್ಲೋಕಗಳನ್ನು ಉದ್ಧರಿಸಿರುತ್ತಾರೆ. ಹೀಗಾಗಿ ಕತೆಯ ಸೊಬಗು ಹೆಚ್ಚಿದೆ. ಬಹು ಮಹತ್ವದ ಉಪದೇಶಗಳನ್ನು ಈ ಕತೆಯು ಒಳಗೊಂಡಿದೆ. ಉದಾ: "ಕಾಮುಕರ ಕಾರ್ಯಗಳೆಲ್ಲವೂ ಅವಿಚಾರಿ ಕರ್ಮಗಳಲ್ಲವೇ?" "ಧರ್ಮಾರ್ಥಕಾಮಗಳನ್ನು ಪರಸ್ಪರ ಅವಿರೋಧವಾಗಿ ಸೇವಿಸಬೇಕು". "ದೇಹದೇಹಾನುಬಂಧಿಯಾದ ಕಾಮಸುಖಗಳು ನಶ್ವರಗಳು, ಮುಂದೆ ಅನರ್ಥಕ್ಕೆ ಕಾರಣಗಳು, ಸಕಲ ಪುರುಷಾರ್ಥಗಳಿಗೂ ಮೂಲಕಾರಣವಾದ ಧರ್ಮವೇ ಪ್ರಾಪ್ಯವಾದುದು! "ಕಾಮವು ಉಪಭೋಗದಿಂದ ಶಮನವಾಗುತಕ್ಕುದಲ್ಲ" "ದುಃಖಿಸುವುದು ಆಪತ್ತಿನ ಪರಿಹಾರಕ್ಕೆ ಉಪಾಯವಲ್ಲ. ಅದಕ್ಕೆ ಧರ್ಮವೇ ಯೋಗ್ಯ ಸಾಧನವು". "ಹುಟ್ಟಿನಲ್ಲಿ ಪಡೆದ ಶರೀರವನ್ನೇ ಜೀವನು ಪರಿತ್ಯಜಿಸಿ ನಿರ್ವಾಣ ಹೊಂದುವನು ಅಂದಮೇಲೆ ಮಧ್ಯೆ ಸಂಭವಿಸಿದ ಐಶ್ವರ್ಯ ಪತ್ನಿಪುತ್ರಾದಿಗಳು ಅಗಲಿ ಹೋಗುವದೇನಾಶ್ಚರ್ಯವು?" ಇತ್ಯಾದಿ.

ಈ ಗ್ರಂಥವನ್ನು ಸಕಲರೂ ಓದಿ, ಜೀವಂಧರನಂತೆ ಪುಣ್ಯಭಾಗಿಗಳಾಗಬೇಕೆಂದು ಕೋರುತ್ತೇನೆ. ಈ ಶ್ರೇಷ್ಠ ಚರಿತೆಗೆ ಎರಡು ಶಬ್ದ ಮುನ್ನುಡಿ ಬರೆಯಲು ಅವಕಾಶ ನೀಡಿದುದಕ್ಕಾಗಿ ಪರಮಪೂಜ್ಯ ಸ್ವಸ್ತಿಶ್ರೀ ೧೦೫ ಅತಿಬಲಮಹಾರಾಜರಿಗೆ ಸಾಷ್ಟಾಂಗವೆರಗಿ, ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

೨೦-೧೧-೭೨ **ನೇಮಿನಾಥ ಕಲ್ಲಪ್ಪ ಇಂಚಲ**

## ಜೀವಂಧರ ಚರಿತ್ರೆ, ಸ್ತೋತ್ರಸಾರ ಸಮುಚ್ಚಯ, ಶಾಸ್ತ್ರಸಾರ ಸಮುಚ್ಚಯ, ಆತ್ಮನಿವೇದನೆ ಈ ಶಾಸ್ತ್ರಗಳಿಗೆ ವಾರ್ಗದಾನ ಮಾಡಿದವರ ಹೆಸರುಗಳು



| | ಹೆಸರು | ರೂ. |
|---|---|---|
| ೧) | ಕೌಶಲ್ಯಮ್ಮ ಎಮ್. ಸಿ. ಬೆಂಗಳೂರ | ೧೦೧ |
| ೨) | ಕಮಲಮ್ಮಾ ಬೆಂಗಳೂರ | ೫೧ |
| ೩) | ಜಿನಮತಿ ಮನೋಹರ ಧಂಡಾವತಿ ಬಾಗೇವಾಡಿ | ೩೦ |
| ೪) | ಶಕುಂತಲಾ ಜ್ವಾಲಣ್ಣಾ ಮೈಸೂರ ಸ್ಟೋರ | ೨೫ |
| ೫) | ನಳಿಣಿ ನಿರ್ಮಲಕುಮಾರ ಮೈಸೂರ ಸ್ಟೋರ | ೨೫ |
| ೬) | ಶಾರದಾಬಾಯಿ ನಾಭಿರಾಜ ರೋಖಡೆ ಹುಬ್ಬಳ್ಳಿ | ೨೫ |
| ೭) | ಹಾಲಮ್ಮಾ ಬಾಬುರಾವ ರೋಖಡೆ ಹುಬ್ಬಳ್ಳಿ | ೨೫ |
| ೮) | ಶಾಂತವ್ವ ಬಾಬುರಾವ ಅವಲಕ್ಕಿ ,, | ೨೫ |
| ೯) | ಪ್ರೇಮಾ ರೋಖಡೆ ,, | ೨೫ |
| ೧೦) | ಸುಮಿತ್ರಾಬಾಯಿ ಹೋತಪೇಟೆ ,, | ೨೫ |
| ೧೧) | ಪದ್ಮಕ್ಕಾ ಹಂಜಿ ಶಹಾಪೂರ | ೨೫ |
| ೧೨) | ಸುಮಿತ್ರಾ ನೇಮಿನಾಥ ಇಂಚಲ ಬೆಳಗಾಂವ | ೨೫ |
| ೧೩) | ಬಾಹುಬಲಿ ಕುಡಚಿ ಬೆಳಗಾಂವ | ೨೫ |
| ೧೪) | ಸುಲೋಚನಾ ಲೇಂಗಡೆ ಬೆಳಗಾಂವ | ೨೫ |
| ೧೫) | ಚಂಪಕ್ಕಾ ಮಾಲಗತ್ತಿ ಹುಬ್ಬಳ್ಳಿ | ೨೫ |
| ೧೬) | ಇಂದ್ರಕ್ಕಾ ಶಾಂತರಾಜ ಪತ್ರಾವಳಿ | ೨೫ |
| ೧೭) | ರಾಜಮ್ಮಾ ಟೀಕಣ್ಣವರ ಹುಬ್ಬಳ್ಳಿ | ೨೫ |

೧೮) ರುಕ್ಮಿಣಿಬಾಯಿ ಸಂಗಮಿ ಬಾಗಲಕೋಟ ೨೫
೧೯) ಸುಶೀಲಾಬಾಯಿ ಸಂಗಮಿ ,, ೨೫
೨೦) ಧರಣೆಮ್ಮ ಸಂಗಮಿ ,, ೨೫
೨೧) ಜಯವ್ವಾ ರಾಮಚಂದ್ರಪ್ಪಾ ಬಾಗಿ ಹುಬ್ಬಳ್ಳಿ ೨೫
೨೨) ಶ್ರೀಕಾಂತೆವ್ವಾ ಹದಳಗಿ ತೇರದಾಳ ೨೫
೨೩) ಲೀಲವ್ಮಾ ಮಿರಜಿ ಬಾಗಲಕೋಟ ೧೫
೨೪) ಇಂದುಮತಿ ಶಾಂ. ಬೀಳಗಿ ಉಪಾಧ್ಯೆ ಬಾಗಲಕೋಟ ೧೫
೨೫) ಶ್ರೀಕಾಂತವ್ವ ಹದಳಗಿ ಧಾರವಾಡ ೧೫
೨೬) ಶ್ರೀಕಾಂತಿ ಮುನವಳ್ಳಿ ೧೫
೨೭) ಸರೋಜಾ ಹಣಮಂತಪ್ಪಾ ಗುಗ್ಗರಿ ಹುಬ್ಬಳ್ಳಿ ೧೧
೨೮) ಚಂದ್ರವ್ವ ಕೊಂ. ದೇವೇಂದ್ರಪ್ಪ ಮಂಡೇದ ತಿಗಡೊಳ್ಳಿ ೧೧
೨೯) ಪ್ರಸನ್ನ ಹೂಲಿ ಹುಬ್ಬಳ್ಳಿ ೧೦
೩೦) ಶ್ರೀಮತಿಬಾಯಿ ಚಂದ್ರಕಾಂತ ಉಪಾಧ್ಯೆ ಸೋಲಾಪೂರ ೧೦
೩೧) ವಜ್ರಮ್ಮಾ ಮುತಗಿ ಧಾರವಾಡ ೧೦

---

ಮೇಲೆ ವಾಗ್ದಾನ ಮಾಡಿದವರಲ್ಲಿ ಅರ್ಧ ಜನರು ಇನ್ನೂ ಹಣ ಕೊಟ್ಟಿಲ್ಲ. ಬೇಗನೇ ಕೊಡಬೇಕು. ಇಂತಿ ಆಶೀರ್ವಾದಗಳು.

---

# ಜೀ ವಂ ಧ ರ

++++++++++++++

## ಜೀವಂಧರನ ಜನನ

ಭರತಖಂಡವು ಜಂಬೂದ್ವೀಪಕ್ಕೆ ಅಲಂಕಾರಪ್ರಾಯವಾದುದು. ಅದರಲ್ಲಿ ಸುವರ್ಣಭರಿತ ಭಂಡಾರದಂತೆ "ಹೇಮಾಂಗದ" ಎಂಬ ಒಂದು ಪ್ರಸಿದ್ಧವಾದ ದೇಶವಿತ್ತು. ಅದಕ್ಕೆ "ರಾಜಪುರಿ" ಎಂಬುದು ರಾಜಧಾನಿಯು. ಬ್ರಹ್ಮನಿಗೆ ಅಲಕಾಪುರ ನಿರ್ಮಾಣದಲ್ಲಿ ಈ ಪುರವು ಮಾತೃಕೆಯಾಯಿತೋ ಎಂದು ಊಹಿಸುವಂತಿತ್ತು ಇದರ ಸೊಬಗು. ಇಲ್ಲಿ ಸತ್ಯಂಧರನೆಂಬ ರಾಜನು ವಿಜಯಾಮಹಾದೇವಿಯೆಂಬ ರಾಣಿಯೊಡನೆ ಪಟ್ಟವೇರಿ ರಾಜ್ಯವಾಳುತ್ತಿದ್ದನು.

ಸತ್ಯಂಧರನು ಸತ್ಯವಚನಶೀಲನು. ಸತತೋದ್ಯೋಗಿಯು. ಪ್ರಾಜ್ಞನು. ಆದರೂ ವಿಷಯಾಸಕ್ತಿಗೊಳಗಾದನು. ರಾಣಿಯಲ್ಲಿ ಅತ್ಯಂತ ಅನುರಾಗವುಳ್ಳವನಾಗಿ ರಾಜ್ಯಕೃತ್ಯಗಳನ್ನು ಮರೆತನು. ಪತ್ನಿ ಸಂತೋಷವೇ ಆತನಿಗೆ ಆದ್ಯಕರ್ತವ್ಯವಾಯಿತು. ವಿಷಯಾಸಕ್ತರಲ್ಲಿ ಯಾವ ಗುಣಗಳಿದ್ದರೇನು ? "ವಿಷಯಾಸಕ್ತ ಚಿತ್ತಾನಾಂ ಗುಣಃ ಕೋ ವಾ ನ ನಶ್ಯತಿ" ಎಲ್ಲವೂ ವ್ಯರ್ಥವೇ. ರಾಜ್ಯವು ಆತನ ಭೋಗಕ್ಕೆ ಪ್ರತಿಬಂಧಕವಾಯಿತು. ಆಳಿಕೆಯ ಭಾರವನ್ನು ಕಾಷ್ಠಾಂಗಾರನೆಂಬೊಬ್ಬ ಕೃತಘ್ನನ ಕೈಗೊಪ್ಪಿಸಿದನು. ಕಾಮುಕರ ಕಾರ್ಯಗಳೆಲ್ಲವೂ ಅವಿಚಾರಿತ ರಮ್ಯಗಳಲ್ಲವೇ! "ಅವಿಚಾರಿತ ರಮ್ಯಂ ಹಿ ರಾಗಾಂಧಾನಾಂ ವಿಚೇಷ್ಟಿತಂ" ಪರಿಣಾಮದ ವಿಚಾರವು ಅವರಿಗಿರ ವುದಿಲ್ಲ.

ಅರಸನ ಈ ವರ್ತನೆಯಿಂದ ಸ್ವಾಮಿಭಕ್ತರಾದ ಮಂತ್ರಿಗಳು ವ್ಯಸನಗೊಂಡರು ಪ್ರಭುವಿನ ಬಳಿಗೆ ಬಂದು ವಿನಯದಿಂದ— "ಪ್ರಭೋ! ತಮಗೆ ತಿಳಿಯದೊಂದೂ ಇಲ್ಲ. ಆದರೂ ಸ್ಮರಣಾರ್ಥವಾಗಿ ಹೇಳಿಕೊಳ್ಳುತ್ತೇವೆ ಅರಸರು ತಮ್ಮ ಮನಸ್ಸನ್ನೇ ನಂಬಬಾರದಂತೆ. ಹೀಗಿರಲು ಅನ್ಯರನ್ನು ನಂಬುವುದು ಎಂತು ಉಚಿತವೆನಿಸುವುದು ? ಆದರೆ ರಾಜಕೀಯ ವ್ಯಾಪಾರವು ಇತರರನ್ನು ನಂಬಿಯೇ ಸಾಗಬೇಕಾದುದರಿಂದ ಎಲ್ಲರ

ಲ್ಲಿಯೂ ವಿಶ್ವಾಸವನ್ನಿಟ್ಟವನಂತೆ ನಟಿಸಿಕೊಂಡಿರಬೇಕು. ಸಂಪೂರ್ಣ ಯಾರನ್ನೂ ನಂಬಬಾರದು. ಸದಾ ಜಾಗರೂಕರಾಗಿಯೇ ಇರಬೇಕು. ಧರ್ಮಾರ್ಥಕಾಮಗಳನ್ನು ಪರಸ್ಪರ ಅವಿರೋಧವಾಗಿ ಸೇವಿಸಬೇಕು. ಸುಖಾಪೇಕ್ಷೆಯಿಂದ ಧರ್ಮಾರ್ಥಗಳನ್ನು ಬಿಡುವುದು ಸರಿಯಲ್ಲ. ಸುಖಕ್ಕೆ ಅವೇ ಮೂಲ ಕಾರಣಗಳು. ಧರ್ಮಾರ್ಥಗಳನ್ನು ಬಿಟ್ಟವರಿಗೆ ಫಲರೂಪ ವಾದ ಸುಖವು ಹೇಗೆ ಸಿದ್ಧಿಸುವುದು? ಕಾರ್ಯಪ್ರವೃತ್ತರಾಗುವವರು ಮುಂದಾಗಿ ಯಾವುದು ಪ್ರಾಪ್ಯ ಯಾವುದು ಅಪ್ರಾಪ್ಯ ಯಾವುದು ನಿತ್ಯ ಯಾವುದು ಅನಿತ್ಯ ಎಂಬಿವುಗಳನ್ನು ಚೆನ್ನಾಗಿ ವಿಚಾರಿಸಿಕೊಳ್ಳಬೇಕು. ಅವಿಚಾರದ ಕಾರ್ಯಕ್ಕೆ ಪಶ್ಚಾತ್ತಾಪವೇ ಫಲವಲ್ಲವೇ? ಮುಖ್ಯವಾಗಿ ಪ್ರಕೃತ ತಮ್ಮ ಕಾರ್ಯವು ಆಲೋಚನೀಯವೆಂದಿಷ್ಟೇ ತಿಳಿಸುವೆವು. ಈ ದೇಪ ದೇಹಾನುಬಂಧಿಯಾದ ಕಾಮ ಸುಖಗಳು ನಶ್ವರಗಳು. ಮುಂದೆ ಅನರ್ಥಕ್ಕೆ ಕಾರಣಗಳು. ಸಕಲ ಪುರುಷಾರ್ಥಗಳಿಗೂ ಮೂಲ ಕಾರಣ ವಾದ ಧರ್ಮವೇ ಪ್ರಾಪ್ತವಾದುದು. ಇದಕ್ಕೆ ಅರ್ಥ ಕಾಮ ಮೋಕ್ಷ ಗಳು ಫಲಪರಂಪರೆಗಳು. ರಾಜರಿಗೆ ಪ್ರಜಾಪರಿಪಾಲನವೇ ಪರಮ ಧರ್ಮವಾಗಿದೆ. ಇದನ್ನು ನಶ್ವರವಾದ ಕಾಮಪುರುಷಾರ್ಥಾನುಭವಕ್ಕಾಗಿ ತೊರೆದು ರಾಜ್ಯಶ್ರೀಯನ್ನು ಪರರ ಕೈಗೊಪ್ಪಿಸುವುದು ಅನುಚಿತ ವಾಗುವುದಲ್ಲವೇ? " ಎಂದು ಜ್ಞಾಪಿಸಿಕೊಂಡರು. ಅಜ್ಞಾನಾಂಧನಾದ ಸತ್ಯಂಧರನಲ್ಲಿ ಮಂತ್ರಿಗಳ ಈ ಸದ್ಬೋಧನೆಯು ಯಾವ ಪರಿಣಾಮವನ್ನು ಉಂಟುಮಾಡಲಿಲ್ಲ. ಆತನು ಆ ಕಾಷ್ಠಾಂಗಾರನನ್ನೇ ರಾಜಕಾರ್ಯದಲ್ಲಿ ನಿಯಮಿಸಿಬಿಟ್ಟನು. " ನ ಜಾತು ಕಾಮ: ಕಾಮಾನಾಮುಪ ಭೋಗೇ ನ ಶಾಮ್ಯತೀ " ಎಂಬಂತೆ ಕಾಮವು ಉಪಭೋಗದಿಂದ ಶಮನವಾಗ ತಕ್ಕುದಲ್ಲವಾದುದರಿಂದ ಅರಸನು ಹಗಲಿರುಳು ವಿಷಯಾಂಧನಾಗಿಯೇ ಕಾಲಕಳೆಯುತ್ತಿದ್ದನು.

ಒಂದು ದಿನ ನಿದ್ರೆಯಲ್ಲಿದ್ದ ವಿಜಯಾಮಹಾದೇವಿಗೆ ಬೆಳಗಿನ ಜಾವದಲ್ಲಿ ಮೊದಲಿಗೆ ಒಂದು ಅಶೋಕವೃಕ್ಷವು ಕಂಡು ಕಣ್ಮರೆಯಾ ದಂತೆಯೂ ಆ ಮೇಲೆ ಕಿರೀಟದಿಂದೊಡಗೂಡಿದ ಎಳೆಯ ಇನ್ನೊಂದು ಅಶೋಕವೃಕ್ಷವು ತೋರಿದಂತೆಯೂ ಬಳಿಕ ಎಂಟು ಪುಷ್ಪಮಾಲಿಕೆಗಳು

ಕಾಣಿಸಿದಂತೆಯೂ ಸ್ವಪ್ನವಾಯಿತು. ಈ ಭವಿಷ್ಯತ್ಸೂಚಕ ಸ್ವಪ್ನದಿಂದ ರಾಣಿಯು ಎಚ್ಚರಗೊಂಡಳು. ಎದ್ದು ಪ್ರಾತರ್ವಿಧಿಗಳನ್ನು ತೀರಿಸಿ ಅರಸನ ಬಳಿಗೆ ಬಂದಳು. ಅರ್ಧಾಸನವೇರಿ ಕುಳಿತು ಸ್ವಪ್ನವೃತ್ತಾಂತ ವನ್ನು ಪತಿಗರುಹಿದಳು. ಅರಸನು ತನ್ನಲ್ಲೇ ಅದರ ಫಲಗಳನ್ನು ನೆನೆದು ಒಂದಿಷ್ಟು ಖಿನ್ನಮನಸ್ಕನಾಗಿ ಕೆಲವನ್ನು ಮುಚ್ಚಿ ಈ ರೀತಿ ಪತ್ನಿಗೆ ವಿವರಿಸಿದನು.

"ಎಲೈ ದೇವಿಯೇ! ನೀನು ಸ್ವಪ್ನದಲ್ಲಿ ಕಿರೀಟದಿಂದೊಡಗೂಡಿದ ಎಳೆಯ ಅಶೋಕವೃಕ್ಷವನ್ನು ಕಂಡುದರಿಂದ ಮುಂದೆ ನಿನ್ನಲ್ಲಿ ಮಹಾ ಭಾಗ್ಯಶಾಲಿಯಾದ ಪುತ್ರನೊಬ್ಬನು ಜನಿಸುವನೆಂತಲೂ. ಬಳಿಕ ಎಂಟು ಪುಷ್ಪಮಾಲಿಕೆಗಳು ತೋರಿದುದರಿಂದ ಆ ಪುತ್ರನಿಗೆ ಎಂಟು ಮಂದಿ ಪತ್ನಿಯ ರಾಗುವರೆಂತಲೂ ಅರ್ಥವಾಗುತ್ತದೆ. ಇನ್ನು ನಿನಗೆ ಮುಂದಾಗಿ ತೋರಿ ಕಣ್ಮರೆಯಾದ ಅವೊಂದು ಅಶೋಕವೃಕ್ಷದ ಸಂಗತಿಯನ್ನು ಕೇಳುವೆಯಾದರೆ ಅದು ನಿನಗೆ ಬೇಡವೆನ್ನುವೆನು. ತಿಳಿಯಲೇಬೇಕೆಂದು ಹಟ ಹಿಡಿಯದಿರು" ಎಂದು ಮೊಗಗುಂದಿ ನುಡಿದನು. ಅರಸನು ಈ ರೀತಿ ಸ್ವಪ್ನದ ಅಶುಭ ಫಲ ವನ್ನು ಮುಚ್ಚಲು ಪ್ರಯತ್ನಿಸಿದರೂ ಆತನ ಮುಖ ಭಾವವೂ ಮಾತಿನ ರೀತಿಯೂ ರಾಣಿಗೆ ಅದನ್ನು ತಿಳಿಸಿದುವು. ಅಶೋಕವೃಕ್ಷದ ಕಣ್ಮರೆಯೇ ಪತಿಯ ಕಣ್ಮರೆಯೆಂಬ ಅರಿವು ಆಕೆಗಾಯಿತು. ಚಿಂತೆಯುರಿತಾಗಿ ಮೂರ್ಛೆ ಗೊಂಡು ನೆಲಕ್ಕೊರಗಿದಳು. ಈಗ ಇವಳನ್ನು ಸಂತಯಿಸಲಿಕ್ಕೆ ಅರಸನಿಗೆ ತತ್ವಬೋಧೆಯಲ್ಲದೆ ಬೇರೆ ಸಾಧನವಿಲ್ಲದಾಯಿತು.

"ಎಲೈ ರಾಣಿಯೇ! ಸ್ವಪ್ನದಲ್ಲಿ ನೀನು ಏನೇನೋ ಕಂಡಿರಬಹುದು. ಅಷ್ಟು ಮಾತ್ರದಿಂದಲೇ ಎಲ್ಲವೂ ಆಗಿಯೇ ಹೋಯಿತೆಂದು ಭಾವಿಸು ವುದು ಮೂಢತನವಲ್ಲವೆ? ನಿನ್ನ ಈ ದುಃಖವು ಈಗಲೇ ನನ್ನನ್ನು ಮೃತ ನನ್ನಾಗಿ ಮಾಡುವುದು. ರಕ್ಷಿಸಲಿಚ್ಛೆಯುಳ್ಳವರು ಫಲಿತವಾದ ವೃಕ್ಷವನ್ನು ದಹಿಸುತ್ತಾರೆಯೇ? ದುಃಖಿಸುವುದು ಆಪತ್ತಿನ ಪರಿಹಾರಕ್ಕೆ ಉಪಾಯವಲ್ಲ. ಬಿಸಿಲಿಂದುಂಟಾದ ತಾಪ ಬೆಂಕಿಯಲ್ಲಿ ಬಿದ್ದರೆ ಆರುವುದೇ? ವಿಪತ್ಪರಿಹಾರಕ್ಕೆ ಧರ್ಮವೇ ಯೋಗ್ಯ ಸಾಧನವು. ಬೃಹಜ್ಜ್ಯೋತಿಯಿಂದ ಪ್ರಕಾಶಿತವಾದ

ಪ್ರದೇಶದಲ್ಲಿ ಕತ್ತಲೆಯು ಹರಡುವುದಿಲ್ಲವಷ್ಟೇ. ಆದುದರಿಂದ ಧರ್ಮವನ್ನೇ ಅವಲಂಬಿಸು; ಧೀರಳಾಗು." ಎಂದು ಬೋಧಿಸಿದನು. ಪತಿಯ ಧರ್ಮ ಬೋಧೆಯಿಂದ ವಿಜಯಾ ಮಹಾದೇವಿಯು ಸಮಾಧಾನಹೊಂದಿದಳು. ಮೊದಲಿನಂತೆ ಪತಿಯೊಡನೆ ಆನಂದದಿಂದಿದ್ದಳು.

ಕೆಲವು ಕಾಲದ ಮೇಲೆ ವಿಜಯಾ ಮಹಾದೇವಿಯು ಗರ್ಭವತಿಯಾದಳು. ಪತ್ನಿಯ ಗರ್ಭಚಿಹ್ನೆಯು ಮರೆತಿದ್ದ ಅಶುಭ ಸ್ವಪ್ನಫಲವನ್ನು ಅರಸನಿಗೆ ನೆನಪುಗೊಟ್ಟಿತು. ಸ್ವಪ್ನದ ಸಕಲ ಫಲಗಳೂ ಇದೇ ಪ್ರಕಾರ ಸಿದ್ಧಿಸಬಹುದೆಂದು ನಂಬಿದನು. ಮಂತ್ರಿಗಳ ಹಿತವಚನವನ್ನು ತಿರಸ್ಕರಿಸಿದ ತನ್ನ ಅವಿವೇಕತನಕ್ಕೆ ಮನದಲ್ಲೇ ಮರುಗಿದನು. "ವಿಪಾಕೇ ಹಿ ಸತಾಂ ವಾಕ್ಯಂ ವಿಶ್ವಸಂತ್ಯ ವಿವೇಕಿನಃ" ಎಂಬಂತೆ ಅವಿವೇಕಿಗಳಿಗೆ ಕಷ್ಟ ಬಂದಾಗ ಸತ್ಪುರುಷರ ವಾಕ್ಯವು ಸತ್ಯವೆಂದು ತೋರುತ್ತದೆ. ಒಡನೆ ಅರಸನು ಆತ್ಮರಕ್ಷಣೆಯಲ್ಲಿ ಮನಸಿಟ್ಟನು ಆದರೆ ಅನುಚಿತಕಾಲದಲ್ಲಿ ಉಂಟಾದ ಈ ಅಪೇಕ್ಷೆಯು ಸಫಲವಾಗುವುದು ಹೇಗೆ? ಹಣ್ಣಿನ ಕಾಲದಲ್ಲಿ ಹೂವನ್ನಪೇಕ್ಷಿಸಿದರೆ ದೊರೆಯುವುದೇ ? ಹೀಗೆಂದು ಚಿಂತಿಸಿ ಮಹಾಶಯನಾದ ಸತ್ಯಂಧರನು ಆತ್ಮರಕ್ಷಣೆಗಿಂತಲೂ ಮುಂದೆ ಜನಿಸುವ ತನ್ನ ವಂಶೋದ್ಧಾರಕನಾದ ಪುತ್ರನ ಸಂರಕ್ಷಣೆಯೇ ಮುಖ್ಯವಾದುದು ಎಂದು ಬಗೆದನು. ವಿಜಯಾ ಮಹಾದೇವಿಯ ಬಯಕೆಗಳನ್ನೊಂದನ್ನೂ ಕಡೆಗಣಿಸದೆ ಸಲ್ಲಿಸುತ್ತಿದ್ದನು. ಒಮ್ಮೆ ಆಕೆಯ ಉದ್ಯಾನವಿಹಾರೇಚ್ಛೆಯನ್ನು ನೆರವೇರಿಸುವುದಕ್ಕಾಗಿ ನವಿಲುಯಂತ್ರವೊಂದನ್ನು ಮಾಡಿಸಿದನು. ಅದರಲ್ಲಿ ಅವಳನ್ನು ಕೂರಿಸಿ ಆಕಾಶದಲ್ಲಿ ಸಂಚಾರ ಮಾಡಿಸುತ್ತಿದ್ದನು.

ಇತ್ತ ಅರಸನು ಈ ರೀತಿ ಪತ್ನಿಯ ಬಯಕೆಯನ್ನು ಈಡೇರಿಸುತ್ತಿರಲು, ಅತ್ತ ಕೃತಘ್ನನೂ ರಾಜದ್ರೋಹಿಯೂ ಆದ ಕಾಷ್ಟಾಂಗಾರನು ರಾಜನನ್ನು ಸಂಹರಿಸಿ ಸ್ವತಂತ್ರನಾಗಿ ತಾನೇ ಪಟ್ಟವೇರಬೇಕೆಂದು ಆಶಿಸಿದನು. ಹೀಗೆ ದುರಭಿಲಾಷಗ್ರಸ್ತನಾದ ಆತನ ಮನಸ್ಸಿನಲ್ಲಿ "ಪರಾಧೀನತೆಗಿಂತ ಮರಣವೇ ಲೇಸು. ಸಿಂಹಕ್ಕೆ ಮೃಗರಾಜ ಪದವಿಯು ಯಾರೂ ಕೊಟ್ಟು ಬಂದುದಲ್ಲ. ಸ್ವಸಾಮರ್ಥ್ಯದಿಂದ ದೊರಕಿತು. ಹಾಗೆಯೇ ನಾನೂ ಸ್ವಪ್ರಯತ್ನದಿಂದ

ರಾಜ್ಯವನ್ನು ಪಡೆಯಬೇಕು. ರಾಜ್ಯವು ಶೂರರಿಗಲ್ಲದೆ ಅನ್ಯರಿಗಲ್ಲ." ಎಂಬ ಭಾವನೆಗಳು ಬರತೊಡಗಿದವು. ಆದರೂ ಜನರ ಮುಂದೆ ಸಭ್ಯನಂತೆ ಸತ್ಯಸಂಧನಂತೆ ಸ್ವಾಮಿಭಕ್ತನಂತೆ ನಟಿಸುತ್ತಿದ್ದನು.

ಒಮ್ಮೆ ಮಂತ್ರಿಗಳನ್ನು ಕರೆದು ರಹಸ್ಯದಲ್ಲಿ "ಮಂತ್ರಿಗಳೇ! ದುರ್ದೈವಿಯಾದ ನಾನು ಈಗ ಒಂದು ಧರ್ಮಸಂಕಟಕ್ಕೊಳಗಾಗಿರುವೆನು. ನಿಮಗೆ ಹೇಳಲಿರುವ ಈ ಸಂಗತಿಯನ್ನು ಆಲೋಚಿಸುವುದು ಸಹ ಮಹಾಪಾಪವಾಗಿದೆ. ಗತ್ಯಂತರವಿಲ್ಲದೆ ನಿಮಗೆ ತಿಳಿಸುತ್ತಿದ್ದೇನೆ. ಕೇಳಬೇಕು. ನಮ್ಮ ಪ್ರಭುವಾದ ಸತ್ಯಂಧರನಿಗೆ ದ್ರೋಹಿಯಾದ ದೇವತೆಯೊಂದು ರಾಜನಿಗೆ ದ್ರೋಹ ಮಾಡು ದ್ರೋಹ ಮಾಡು ಎಂದು ನನ್ನನ್ನು ಪ್ರತಿದಿನವೂ ಮತ್ತೆ ಮತ್ತೆ ಒತ್ತಾಯಿಸುತ್ತಿದೆ. ಇದನ್ನು ನಾನು ಮಾಡಬೇಕೇ? ಬಿಡಬೇಕೇ? ಇದರಿಂದ ನನಗೆ ಹಿತವಾಗುವುದೇ ಅಹಿತವಾಗುವುದೇ ಈ ಎಲ್ಲವನ್ನೂ ನಾವೀಗ ವಿಚಾರಿಸಬೇಕಾಗಿದೆ. ನಾನಂತೂ ಇನ್ನು ಯಾವುದೇ ಒಂದು ನಿರ್ಣಯಕ್ಕೆ ಬರಲಿಲ್ಲ. ಪರ್ಯಾಲೋಚಿಸಿ ಪ್ರವರ್ತಿಸಿದರೆ ಕೆಡಕುಂಟಾಗದೆಂದು ನಿಮ್ಮ ಅಭಿಮತವನ್ನು ಅಪೇಕ್ಷಿಸಿದ್ದೇನೆ. ಸ್ವಾಮಿದ್ರೋಹದ ಈ ಮಾತನ್ನು ಕೇಳುವುದಕ್ಕೆ ಕೂಡ ನಾಚಿಕೆ ಪಡುತ್ತೇನೆ. ಆದರೆ ಹೇಳದೆ ನಿರ್ವಾಹವಿಲ್ಲ. ಏಕಂದರೆ ದೇವತೆಯ ಆದೇಶ ನೆರವೇರಿಸದಿದ್ದರೆ ಅದು ಮುನಿದು ಇನ್ನೇನು ಕೇಡನ್ನೊದಗಿಸುವುದೋ ಯಾರು ಬಲ್ಲರು? ಒಟ್ಟಾರೆ ನಾನು ಉಭಯಸಂಕಟದಲ್ಲಿ ಸಿಕ್ಕಿಬಿದ್ದು ಪಾರಾಗುವ ಉಪಾಯಗಾಣದೆ ನಿಮ್ಮ ಅಭಿಮತವನ್ನು ಅಪೇಕ್ಷಿಸಿದೆನಲ್ಲದೆ ಬೇರಾವ ಇಚ್ಛೆಯೂ ನನಗಿಲ್ಲ" ಎಂದು ಹೃದಯವನ್ನು ಮುಚ್ಚಿ ಗಂಟಲ ಮೇಲಿನ ಮಾತನ್ನು ಮಾತಾಡಿದನು. ಈ ಮೋಸದ ಮಾತುಗಳನ್ನು ಎಲ್ಲರೂ ಕೇಳಿದರು. ಕಾಷ್ಠಾಂಗಾರನ ಈ ರಾಜದ್ರೋಹಕಾರಕ ಕೃತ್ಯಕ್ಕೆ, ಕುಲೀನರು ಅಪವಾದಕ್ಕೂ ಯತಿಗಳು ಪ್ರಾಣಿವಧೆಗೂ ಬಡವರು ಬರಗಾಲಕ್ಕೂ ಭಯಪಡುವಂತೆ ಭಯಪಟ್ಟರು.

ಆಗ ಅವರಲ್ಲಿ ಅತ್ಯಂತ ರಾಜಭಕ್ತಿಯುಳ್ಳ ಧರ್ಮದತ್ತನೆಂಬ ಮಂತ್ರಿಯು ಒದಗಬಹುದಾದ ಹಾನಿಯನ್ನು ಲೆಕ್ಕಿಸದೆ ಮೂರ್ಖನಾದ ಕಾಷ್ಠಾಂಗಾರನ

ಕೇಳಿಕೆಗುತ್ತರವಾಗಿ ಅಯ್ಯಾ! ರಾಜಭಕ್ತರಿಗೆ ಪ್ರಾಣದಾಸೆಯಿಲ್ಲ- ರಾಜರು ಸರ್ವರಿಗೂ ಪ್ರಾಣಪ್ರಿಯರಾದರು. ಅವರ ರಕ್ಷಣೆಯ ಬಲ ದಿಂದಲೇ ಎಲ್ಲರೂ ಜೀವಿಸುವರು. ರಾಜರಿಗೆ ಮಾಡಿದ ಉಪಕಾರವಾಗಲಿ ಅಪಕಾರವಾಗಲಿ ಅದು ಲೋಕಕ್ಕೆ. ರಾಜರಿಗೆ ಅಪಕಾರ ಮಾಡಿದರೆ ಅದು ಸ್ವಪ್ರಾಣಕ್ಕೆ ಅಪಕಾರಗೈದಂತೆ. ಸರ್ವರಿಗೂ ಪ್ರಾಣಭೂತರಾದ ರಾಜರಿಗೆ ದ್ರೋಹ ಮಾಡುವವನು ಜಗದ್ರೋಹಿಯಾಗುವನು. ಮಹಾ ಪಾತಕಿಯಾಗುವನು. ಈ ಲೋಕದಲ್ಲಿ ರಾಜರು ದೇವತೆಗಳನ್ನೂ ಸಕಲ ಪ್ರಾಣಿಗಳನ್ನೂ ರಕ್ಷಿಸುತ್ತಾರೆ. ದೇವತೆಗಳೇ ಆದರೂ ತಮ್ಮನ್ನು ತಾವೇ ರಕ್ಷಿಸಿಕೊಳ್ಳಲಾರರು. ರಾಜರು ದೇವತೆಗಳಿಗಿಂತಲೂ ಅಧಿಕ ಶಕ್ತಿಸಂಪನ್ನರು. ದೇವತೆಯು ದೇವತಾದ್ರೋಹಿಯನ್ನಷ್ಟೇ ಕೊಲ್ಲುವುದು. ರಾಜರು ಹಾಗಲ್ಲ. ರಾಜದ್ರೋಹಿಯನ್ನು ಮಾತ್ರವಲ್ಲದೆ ಆತನನ್ನು ಹೊಂದಿ ಹೊರೆವವರನ್ನೂ ನಾಶಮಾಡದಿರರು. ಆದುದರಿಂದ ನೀವು ದೇವತಾದ್ರೋಹಿಯಾದರೂ ಚಿಂತೆ ಯಿಲ್ಲ ರಾಜದ್ರೋಹಿಯಾಗಬೇಡಿರಿ. ಜೀವನಾಪೇಕ್ಷಿಗಳಿಗೆ ಜೀವನವನ್ನೂ ಅನಾದರಿಸುವವರಿಗೆ ಕೇಡನ್ನೂ ಉಂಟು ಮಾಡುವ ಅಗ್ನಿಯೋಪಾದಿಯಲ್ಲಿ ರಾಜರನ್ನೂ ಭಯಭಕ್ತಿ ಜಾಗರೂಕತೆಗಳಿಂದ ಸೇವಿಸಬೇಕು" ಎಂದು ನುಡಿದನು.

ಧರ್ಮದತ್ತನ ಈ ಧರ್ಮಬೋಧೆಯು ರಾಜದ್ರೋಹದಲ್ಲಿ ಅತ್ಯಾಸಕ್ತ ನಾದ ಕಾಷ್ಠಾಂಗಾರನಿಗೆ ರುಚಿಸಲಿಲ್ಲ. '' ಪಿತ್ತಜ್ವರವತಃ ಕ್ಷೀರಂ ತಿಕ್ತಮೇವಹಿ ಭಾಸತೇ " ಎಂಬಂತೆ ಕಹಿಯಾಕಯೇ ತೋರಿತು. ಹಗೆಯ ಕೈಗೆ ಆಯುಧವನ್ನು ಕೊಡುವಂತೆ ರಾಜದ್ರೋಹಿಯಾದ ಕಾಷ್ಠಾಂಗಾರನ ಮಾತನ್ನು ಆತನ ಭಾವಮೈದುನನು ಮಾತ್ರ ಬಹಳವಾಗಿ ಮೆಚ್ಚಿ ಪ್ರೋತ್ಸಾಹಿಸಿದನು. ಒಡನೆ ಸತ್ಯಂಧರ ಮಹಾರಾಜನನ್ನು ಕೊಂದು ಬರಬೇಕೆಂದು ಕಾಷ್ಠಾಂಗಾರನು ಸೈನ್ಯಕ್ಕಪ್ಪಣೆಗೊಟ್ಟನು. ಸೈನ್ಯಕ್ಕೆ ಮನಸ್ಸಿಲ್ಲ. ತಿರಸ್ಕರಿಸಲು ಸಾಧ್ಯವಾಗಲಿಲ್ಲ. ಪರಾಧೀನರಾದವರ ಸ್ಥಿತಿಯೇ ಹೀಗೆ. ಸೈನ್ಯವು ಸತ್ಯಂಧರನನ್ನು ಬಂದು ಮುತ್ತಿತು.

ಸೈನ್ಯದ ಆಕ್ರಮಣವನ್ನು ಅರಸನು ದ್ವಾರಪಾಲಕನಿಂದ ತಿಳಿದನು. ಕ್ರುದ್ಧನಾಗಿ ಯುದ್ಧಕ್ಕೆ ಹೊರಟೇ ಬಿಟ್ಟನು. ಇವನ್ನೆಲ್ಲ ಕಂಡ ರಾಣಿಯು

ದು:ಖಿತಳಾಗಿ ಅರ್ಧಾಸನದಿಂದ ಎಚ್ಚರತಪ್ಪಿ ನೆಲಕ್ಕುರುಳಿದಳು. ಅರಸನ ಯುದ್ಧಾಭಿಗಮನಕ್ಕೆ ತಡೆಯಾಯಿತು. ತತ್ವವೇತ್ತನಾದ ಸತ್ಯಂಧರನು ರಾಣಿಯನ್ನು ಸಂತಯಿಸುವುದಕ್ಕಾಗಿ "ರಾಣಿಯೇ! ಶೋಕವನ್ನು ಸಾಕು ಮಾಡು. ಪುಣ್ಯಫಲವು ತೀರಿದ ಬಳಿಕ ಪಾಪದ ಫಲವನ್ನುಣ್ಣಬೇಕಷ್ಟೆ. ದೀಪವಾರಿತೆಂದರೆ ಕತ್ತಲೆಗೆ ಕರೆಬೇಡ. ಭವಾಂತರ ಪಾಪವು ಫಲವನ್ನು ಕೊಟ್ಟೇ ತೀರುವುದು. ಅದು ಅನಿವಾರ್ಯವು. ಯೌವನ ಶರೀರ ಧನ ಸಂಪತ್ತುಗಳು ನಶ್ವರಗಳು. ಇವು ನಾಶವಾಗುವುದರಲ್ಲಿ ಆಶ್ಚರ್ಯವಿಲ್ಲ. ನೀರಗುಳ್ಳೆಯು ಎಷ್ಟು ಹೊತ್ತು ಇದ್ದರೂ ಕಡೆಗೆ ನಾಶವಾಗಿಯೇ ಹೋಗುತ್ತದೆ. ಯಾವುದು ಬರುವುದೋ ಅದು ಒಮ್ಮೆ ಅಗಲಿಯೂ ಹೋಗುವುದು. ಹುಟ್ಟನಲ್ಲೇ ಪಡೆದ ಶರೀರವನ್ನೇ ಜೀವನು ಪರಿತ್ಯಜಿಸಿ ನಿರ್ವಾಣ ಹೊಂದುವನೆಂಬ ಬಳಿಕ ಮಧ್ಯೆ ಸಂಭವಿಸಿದ ಐಶ್ವರ್ಯ ಪತ್ನಿಪುತ್ರಾದಿಗಳು ಅಗಲಿಹೋಗುವುದೇನಾಶ್ಚರ್ಯವು? ಅನಾದಿಯಾಗಿ ನಾನಾ ಜನ್ಮಗಳಲ್ಲಿ ನಾನಾ ದೇಹದೊಡಗೂಡಿ ಸಂಚರಿಸುತ್ತಿರುವ ಈ ಜೀವನಿಗೆ ಒಂದೇ ಮಾತಾ ಪಿತೃ ಪತ್ನೀ ಪುತ್ರ ಶತ್ರು ಮಿತ್ರರೆಂದು ನಿಯಮವಿಲ್ಲ. ಈ ಸಂಬಂಧವು ಕೇವಲ ಭ್ರಾಂತಿಯು ಕಲ್ಪನೆಯೋ ಹೊರತು ನಿಯತಧರ್ಮವಲ್ಲ." ಎಂದು ಮುಂತಾಗಿ ಧರ್ಮಬೋಧೆ ಮಾಡಿದನು. ಆದರೆ ಬಿಸಿಲಿಗೊಣಗಿದ ಹೊಲದಲ್ಲಿ ಬಿತ್ತಿದ ಬೀಜವು ಮೊಳೆಯಲುಂಟೆ? ಶೋಕಾಗ್ನಿದಗ್ಧವಾದ ವಿಜಯಾ ಮಹಾದೇವಿಯ ಮನಸ್ಸಿನಲ್ಲಿ ಈ ಬೋಧೆಯು ಯಾವ ಪರಿಣಾಮವನ್ನೂ ಉಂಟು ಮಾಡಲಿಲ್ಲ. ಕೊನೆಗೆ ಈಕೆಯ ಸಮಾಧಾನಕ್ಕಾಗಿ ಈ ಮೊದಲು ರಚಿಸಿದ ನವಿಲು ಯಂತ್ರದಲ್ಲಿ ಇವಳನ್ನು ಕೂರಿಸಿ ತಾನೇ ಅದನ್ನು ಆಕಾಶದಲ್ಲಿ ನಡೆಯಿಸಿದನು.

ನವಿಲುಯಂತ್ರವು ಆಕಾಶದಲ್ಲಿ ಹಾರಾಡುತ್ತಿತ್ತು. ಶತ್ರುಗಳು ಕಂಡು ಹಿಂಬಾಲಿಸಿದರು. ತತ್ವಜ್ಞನಾದ ಸತ್ಯಂಧರನನ್ನು ಮತ್ತೆ ಅಜ್ಞಾನವು ಆವರಿಸಿತು. ಒದಗಬಹುದಾದ ಕೇಡನ್ನು ಗಣಿಸದೆ ನವಿಲುಯಂತ್ರವನ್ನು ನಡೆಯಿಸುತ್ತಿದ್ದಂತೆ ಶತ್ರುಗಳೊಡನೆ ಯುದ್ಧಕ್ಕೂ ಆರಂಭಿಸಿದನು. ಬಹು ಹೊತ್ತು ಹೋರಾಡಿದನು. ಅಸಂಖ್ಯ ವೀರರು ಈತನಿಂದ ಪರಾಜಿತರಾದರು. ನೋಡಿ ಸತ್ಯಂಧರನ ಮನಸ್ಸು ಬದಲಾಯಿತು. "ಗತ್ಯ

ಧೀನಂ ಹಿ ಮಾನಸಂ " ಎಷ್ಟೆಂದರೂ ಮನುಷ್ಯನ ಮನಸ್ಸು ಮುಂದಿನ ಗತಿಗನುಕೂಲವಾಗಿಯೇ ಪ್ರವರ್ತಿಸುವುದು. ಈ ಹಿಂಸಾಪ್ರಚೋದಕವಾದ ರಾಜ್ಯಾದಿಭೋಗ ವಿಷಯಗಳು ಆತನಿಗೆ ವಿಷಸಮಾನವಾಗಿ ತೋರಿದುವು. ರಾಗಕ್ಕೆ ದುಃಖವೇ ಫಲವೆಂದು ಖಂಡಿತವಾಯಿತು ಒಡನೆ ವಿರಕ್ತಿಯನ್ನು ಹೊಂದಿ ದೇಹವನ್ನು ತ್ಯಜಿಸಿದನು. ದೇವಶ್ರೀಯನ್ನು ಹೊಂದಿಬಿಟ್ಟನು. ಅರಸನ ಕಾಮಾಸಕ್ತತೆಯ ಪರಿಣಾಮವು ಇಲ್ಲಿಗೆ ಮುಟ್ಟಿತು.

ಪಾಕಂ ತ್ಯಾಗಂ ವಿವೇಕಂಚ ವೈಭವಂ ಮಾನಿತಾಮಪಿ ।
ಕಾಮಾರ್ತಾಃ ಖಲು ಮುಂಚಂತಿ ಕಿಮನ್ಯೈಃ ಸ್ವಂಚ ಜೀವಿತಂ ||

ಸ್ತ್ರೀಮೋಹಿತರು ಹೀಗೆಯೇ ಸಮಸ್ತವನ್ನು ಕಳೆದುಕೊಳ್ಳುವರು. ಅರಸನ ಈ ಮರಣವಾರ್ತೆಯು ಪ್ರಜೆಗಳಿಗೆ ತಿಳಿಯಿತು. ಇದೇ ಅವರಿಗೆ ಸಂಸಾರದ ಅಸಾರತೆಯನ್ನು ಬೋಧಿಸಿತು. ವಿರಕ್ತಿಗೆ ಕಾರಣವಾಯಿತು. ಎಲ್ಲರೂ ವೈರಾಗ್ಯವನ್ನು ಹೊಂದಿದರು. ವಾಹಕನಿಲ್ಲದ ನವಿಲು ಯಂತ್ರವು ವಿಜಯಾಮಹಾದೇವಿಯನ್ನು ಹೊತ್ತುಕೊಂಡು ಆ ರಾಜಪುರಿ ಪಟ್ಟಣದ ಸ್ಮಶಾನ ಪ್ರದೇಶದಲ್ಲಿ ಬಂದುಬಿದ್ದಿತು ಬಿದ್ದ ರಭಸಕ್ಕೆ ರಾಣಿಯು ಮೂರ್ಛೆಗೊಂಡಳು. ತುಂಬಿದ ಬಸಿರಿಯಾದುದರಿಂದ ಆಗಲೇ ಅಲ್ಲೇ ಪುತ್ರನನ್ನು ಪ್ರಸವಿಸಿದಳು. ಈ ಮಗುವೇ ಜೀವಂಧರನು.



## ಬಾಲ್ಯ ಮತ್ತು ವಿದ್ಯಾಭ್ಯಾಸ

ಸ್ಮಶಾನದಲ್ಲಿ ಜನಿಸಿದ ಹಸುಳೆಯೂ ಹಡೆದ ರಾಣಿಯೂ ರಕ್ಷಕರಿಲ್ಲದೆ ಅನಾಥರಾಗಿರಲು ಮಗುವಿನ ಸುಕೃತವೇ ರೂಪುತಾಳಿ ಬಂದಂತೆ ದೇವತೆಯೊಂದು ರಾಣಿಗೆ ಪರಿಚಿತಳಾಗಿದ್ದ ದಾದಿಯ ಸ್ವರೂಪದಲ್ಲಿ ಕಾಣಿಸಿಕೊಂಡಿತು. ದಾದಿಯನ್ನು ಕಾಣುತ್ತಲೇ ರಾಣಿಗೆ ದುಃಖವು ಉಕ್ಕಿಬಂದಿತು. ತನ್ನ ದೈನ್ಯಾವಸ್ಥೆಗೂ ಮಗುವಿನ ರಕ್ಷಣೆಗೂ ಚಿಂತಿಸುತ್ತಿರುವ ದೇವಿಯನ್ನು ಕಂಡು ಆ ದಾದಿಯು ಆಕೆಗೆ ಮಗುವಿನ ರಾಜಲಕ್ಷಣಗಳನ್ನೂ ಮಹಿಮೆಯನ್ನೂ ವರ್ಣಿಸಿ " ಎಲೈ ದೇವಿಯೇ ! ನೀನು ಈ ಮಗುವಿನ ರಕ್ಷಣೆಗಾಗಿ ಏನೂ ಚಿಂತಿಸಬೇಕಾಗಿಲ್ಲ. ಈ ನಿನ್ನ ಕ್ಷತ್ರಿಯ

ಪುತ್ರನನ್ನು ರಕ್ಷಿಸತಕ್ಕವನೊಬ್ಬ ಸಿದ್ಧನಿದ್ದಾನೆ. ಅವನು ಈತನನ್ನು ರಕ್ಷಿಸುವನು" ಎಂದು ಸಂತಯಿಸಿದಳು.

ದಾದಿಯ ಮಾತು ಮುಗಿಯುವದರೊಳಗೆ ಯಾವನೋ ಒಬ್ಬನು ತನ್ನ ಸತ್ತ ಮಗನನ್ನು ಸ್ಮಶಾನದಲ್ಲಿ ಒಗೆದು ಯೋಗಿಯೊಬ್ಬನ ಆದೇಶದಂತೆ ಪಡೆಯಲಿರುವ ನೂತನ ಪುತ್ರನನ್ನು ಹುಡುಕುತ್ತಾ ಅಲ್ಲಿಗೆ ಬಂದನು. ಬರುತ್ತಿರುವವನನ್ನು ದೂರದಿಂದಲೇ ರಾಣಿಯು ಕಂಡಳು. ದಾದಿಯ ಮಾತು ಯಥಾರ್ಥವೆಂದು ನಂಬಿದಳು. ಶಿಶುವಿನ ರಕ್ಷಣೆಗೆ ಬೇರೆ ಉಪಾಯಗಾಣದೆ ರಾಣಿಯು " ಮಗುವೇ ! ನೀನು ಎಲ್ಲಾದರೂ ಸುಖವಾಗಿ ಬಾಳಿ ಬದುಕು " ಎಂದು ಮಗುವನ್ನು ಹರಸಿ ಬರುತ್ತಿರುವವನ ಕೈಗೆ ಒಡನೆಯೆ ದೊರಕುವಂತೆ ಸ್ಮಶಾನದಲ್ಲಿ ಮಲಗಿಸಿ ಮರೆಯಾದಳು. ಪುತ್ರಾನ್ವೇಷಕನಾಗಿ ಬಂದವನು ಆ ಪುರದ ವೈಶ್ಯಶ್ರೇಷ್ಠನಾಗಿದ್ದ ಗಂಧೋತ್ಕಟ ಶ್ರೇಷ್ಠಿಯು ಸೌದೆಯನ್ನು ಹುಡುಕುತ್ತಿದ್ದವನು ರತ್ನವನ್ನು ಪಡೆದಂತೆ ಆ ಶ್ರೇಷ್ಠಿಯು ಸ್ಮಶಾನದಲ್ಲಿ ಅನಾಥವಾಗಿ ಮಲಗಿದ್ದ ಈ ಮಗುವನ್ನು ಕಂಡು ಅತ್ಯಂತ ಹರ್ಷಿತನಾದನು. ಪ್ರೀತಿಯಿಂದೆತ್ತಿಕೊಂಡನು. ಆಗ "ಜೀವ" ಎಂಬ ಒಂದು ಆಶೀರ್ವಚನರೂಪವಾದ ಅಶರೀರವಾಣಿಯಾಯಿತು. ಅದನ್ನು ಕೇಳಿದ ಶ್ರೇಷ್ಠಿಯು ಮಗುವಿಗೆ ಇದೇ ಹೆಸರನ್ನಿಡುವೆನೆಂದು ಸಂಕಲ್ಪಿಸಿದನು. ಶಿಶುವಿನೊಡನೆ ಮನೆಗೆ ಮರಳಿದನು. ಆದರೆ ಇದು ತಮ ಮಗುವೆಂದು ತನ್ನಾಕೆಗೆ ಇದನ್ನು ಹೇಗೆ ಒಪ್ಪಿಸುವನು ? ಸತ್ತ ಶಿಶು ಮತ್ತೆ ಜೀವಂತವಾಯಿತೆಂದರೆ ಅವಳು ನಂಬುವಳೇ ? ಸಿಕ್ಕಿದ ಮಗುವೊಂದನ್ನು ತಂದೆನೆಂದರೆ ವಾತ್ಸಲ್ಯಉಂಟಾಗಬಹುದೇ ? ಅಂತು ಹಲವು ಸಂದೇಹಕ್ಕೊಳಗಾದನು.

ಕೊನೆಗೆ ಆಗತಾನೇ ಜನಿಸಿದ ಆ ಹಸುಗೂಸನ್ನು ತಂದು ತನ್ನಾಕೆಯ ಮುಂದಿಟ್ಟು ಹುಸಿಮುನಿಸನ್ನು ತಾಳಿ ಅವಳೊಡನೆ "ಎಲೇ ! ನಿನ್ನ ತಿಳಿಗೇಡಿತನಕ್ಕೆ ಏನು ಹೇಳಲಿ ! ಜೀವಿಸಿರುವ ಮಗನನ್ನು ಈ ಮುದ್ದು ಹಸುಳೆಯನ್ನು ಒಂದಿಷ್ಟು ಪರೀಕ್ಷಿಸಿ ನೋಡದೆ ನಿರ್ಜೀವಿಯಾಗಿದೆಯೆಂದು ನುಡಿದು ಬಿಟ್ಟೆಯಲ್ಲ ! ನಿನ್ನ ಮಾತನ್ನು ನಾನೂ ನಂಬಬೇಕು ! ಅಯ್ಯೋ ಹೆಡ್ಡುತನವೇ" ಎಂದು ಗದರಿಸಿದನು. ಮತ್ತೆ ಸಂತೋಷವನ್ನು ತಾಳಿ " ಇಗೋ

ಜೀವಂತನಾಗಿರುವನೋ ಇಲ್ಲವೋ ನೋಡು" ಎಂದು ಪತ್ನಿಯು ಕೈಗಿತ್ತನು. ಅವಳು ಆ ಶಿಶುವನ್ನು ತನ್ನ ಕರುಳಿಂದೇ ನಂಬಿದಳು ಸತ್ತು ಹುಟ್ಟಿದ ಮಗುವಾದುದರಿಂದ ಪ್ರೀತಿಯು ಇಮ್ಮಡಿಸಿತು. ಮಮತೆಯಿಂದ ಸಾಕಿದಳು.

ಸ್ಮಶಾನದಲ್ಲಿ ಮಗುವನ್ನು ಮಲಗಿಸಿ ಮರೆಯಾಗಿದ್ದ ರಾಣಿಯನ್ನು ಹಿಂದೆ ಹೇಳಿದ ಆ ದಾದಿಯು ಬಂಧುಗಳ ಮನೆಸೇರೆಂದು ಒತ್ತಾಯಿಸಿದಳು. ರಾಣಿಯೊಪ್ಪಲಿಲ್ಲ. ಕೊನೆಗೆ ಆಕೆಯು ರಾಣಿಯನ್ನು ದಂಡಕಾರಣ್ಯದಲ್ಲಿದ್ದ ಒಂದು ಋಷ್ಯಾಶ್ರಮಕ್ಕೆ ಕರೆತಂದಳು. ಅಲ್ಲಿ ಅವಳನ್ನು ತಪಸ್ವಿನಿಯಾಗಿ ಜೀವಿಸುವಂತೆ ನಿಯಮಿಸಿ ಕೃತಕೃತ್ಯಳಾಗಿ ಹೊರಟುಹೋದಳು. ಆಶ್ರಮವಾಸಿನಿಯಾದ ರಾಜಪತ್ನಿಯು ತನ್ನ ಮನೋಮಂದಿರದಲ್ಲಿ ಅರ್ಹತ್ಪರಮೇಶ್ವರನ ಪಾದಕಮಲಗಳನ್ನೂ ಮಗುವನ್ನೂ ಸದಾ ಧ್ಯಾನಿಸುವಳು. ಹಂಸತೂಲಿಕಾತಲ್ಪವೇ ಒತ್ತಿ ಬೇಸರಿಸುವಿಕೆಗೆ ಒರಟು ದರ್ಭೆಯ ಹಾಸಿಗೆಯಲ್ಲೊರಗಬೇಕಾಯಿತು. ಹೊನ್ನಹರಿವಾಣದಲ್ಲಿ ಸಖಿಯರಿಕ್ಕಿದ ಮೃಷ್ಟಾನ್ನವನ್ನುಂಡವಳು ತಾನೇ ಕೈಯಿಂದ ಕೊಯ್ದು ತೃಣಧಾನ್ಯವನ್ನುಣ್ಣಬೇಕಾಯಿತು. ಆದರೂ ರಾಣಿಯು ಈ ವಿಪತ್ಪರಂಪರೆಗಳೆಲ್ಲವೂ ತನ್ನ ಜನ್ಮಾಂತರದ ಫಲವೆಂದು ನಂಬಿ ಶಾಂತಚಿತ್ತದಿಂದ ಎಲ್ಲವನ್ನೂ ಅನುಭವಿಸಿದಳು. "ಅವಶ್ಯ ಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಕರ್ಮಫಲವನ್ನು ಉಣ್ಣಲೇಬೇಕಲ್ಲವೇ !

ಇತ್ತ ಗಂಧೋತ್ಕಟ ಶ್ರೇಷ್ಠಿಯಲ್ಲಿ ಉತ್ಸವಗಳೇ ಉತ್ಸವಗಳು. ಇವೆಲ್ಲವೂ ಮಗುವಿಗಾಗಿ ನಡೆಯುತ್ತಿದ್ದವೆಂದು ಮೂಢನಾದ ಕಾಷ್ಠಾಂಗಾರನೆಂತು ಬಲ್ಲನು? ತನ್ನ ವಿಜಯಕ್ಕಾಗಿ ಜರಗತಕ್ಕವುಗಳೆಂದು ಭಾವಿಸಿ ಶ್ರೇಷ್ಠಿಗೆ ವಿಪುಲವಾಗಿ ದ್ರವ್ಯವನ್ನೀಯುತ್ತಿದ್ದನು. ಶ್ರೇಷ್ಠಿಯು ಆ ರಾಜಪುರಿ ಪಟ್ಟಣದಲ್ಲಿ ಆಗ ತಾನೇ ಹುಟ್ಟಿದ ಎಳೆಮಕ್ಕಳನ್ನೆಲ್ಲಾ ಕಾಷ್ಠಾಂಗಾರನ ಒಪ್ಪಿಗೆಯಿಂದ ಪಡೆದುಕೊಂಡು ಆ ಓರಗೆಯವರೊಡನೆ ತನ್ನ ಮಗನು ಕೂಡಿಯಾಡಿ ಬೆಳೆಯುವಂತೆ ಮಾಡಿದನು. ಹೀಗೆ ಕೆಲವು ಕಾಲ ಕಳೆಯಲು ಗಂಧೋತ್ಕಟ ಶ್ರೇಷ್ಠಿಯ ಪತ್ನಿಯಾದ ಸುನಂದೆಯು ಮತ್ತೊಂದು ಗಂಡು ಮಗುವನ್ನು ಹಡೆದಳು. ಈ ಮಗುವಿಗೆ ಶ್ರೇಷ್ಠಿಯು ನಂದಾಢ್ಯನೆಂದು ಹೆಸರಿಟ್ಟನು.

ತಮ್ಮನ ಜನನದಿಂದ ಜೀವಂಧರನು ಇಷ್ಟಿಷ್ಟು ಬೆಳಗಿದನು. ಈ ಪ್ರಕಾರ ಜೀವಂಧರನು ಬಂಧುಮಿತ್ರರೊಡಗೂಡಿ ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ವೃದ್ಧಿ ಹೊಂದುತ್ತಿದ್ದನು. ವ್ಯಸನ ಸ್ವರೂಪವನ್ನೇ ಅರಿಯದ ಬಾಲ್ಯ ವಯಸ್ಸಿನಲ್ಲಿರುವ ಜೀವಂಧರನಿಗೆ ಐದನೆಯ ವರ್ಷ ಪಡಿಯಿಟ್ಟಿತು. ತೊದಲು ನುಡಿಯು ಮಾಯವಾಯಿತು. ಅತಿಸ್ಫುಟವಾದ ವಾಕ್ಶ್ರೀಯು ಈತನನ್ನು ಸ್ವಯಂವರಿಸಿದಳು. ಅಷ್ಟರಲ್ಲಿ ಈತನ ಪುಣ್ಯದಿಂದ ಆಚಾರ್ಯಧರ್ಮವೇ ಮೂರ್ತಿ ಕೊಂಡಂತಿರುವ "ಆರ್ಯನಂದಿ" ಎಂಬ ಗುರುವೊಬ್ಬರು ಈತನಿಗೆ ದೊರಕಿದರು. ನಿರ್ವಿಘ್ನವಾಗಿ ಇಷ್ಟಸಿದ್ಧಿಯಾಗಲೆಂದು ಗುರುವಿನ ಸಮ್ಮುಖದಲ್ಲಿ ಮೊದಲು ಸಿದ್ಧಪರಮೇಷ್ಠಿಯ ಪೂಜೆಯು ನಡೆಯಿತು. ಗುರುವು ಸಿದ್ಧಮಂತ್ರ ವರ್ಣಾವಳಿಯ ಮೇಲುಹಂತಿಯನ್ನು ಹಾಕಿದರು. ಶಾಸ್ತ್ರೋಕ್ತ ರೀತಿಯಲ್ಲಿ ಜೀವಂಧರನ ವಿದ್ಯಾಭ್ಯಾಸವು ಸಾಗಿತು.

ಆರ್ಯನಂದಾಚಾರ್ಯರು ಮಹಾಪಂಡಿತರು, ವಿದ್ಯಾಪ್ರಧಾನ ಪಟುಗಳು ಜೀವಂಧರನೂ ಮಹಾಮೇಧಾವಿಯು. ಅಲ್ಲದೆ ಗುರುಶುಶ್ರೂಷಾ ನಿರತನು. ಆದುದರಿಂದ ಅವನಿಗೆ ಸಕಲವಿದ್ಯೆಗಳೂ ಮರೆತುದನ್ನು ನೆನಪು ಮಾಡಿದಂತಾದುವು. ಈತನಿಗೆ ಸರಿಮಿಗಿಲಾದ ವಿದ್ವಾಂಸರೇ ಅಂದು ಇಲ್ಲವೆಂದಾಯಿತು. ಶಿಷ್ಯನ ಜಾಣ್ಮೆಗೆ ಗುರುಗಳು ಹರ್ಷಿತರಾದರು. ವಿದ್ಯಾಪ್ರದಾನಕಾರ್ಯವು ಸಫಲವಾದಲ್ಲಿ ಯಾವ ಗುರುವಿಗೆ ಹರ್ಷವಾಗದು ?.

ಶಿಷ್ಯನ ಅಭಿವೃದ್ಧಿಯಿಂದ ಸಂತುಷ್ಟರಾದ ಆರ್ಯನಂದಾಚಾರ್ಯರು ಒಂದು ದಿನ ಜೀವಂಧರನನ್ನು ಸಮೀಪಕ್ಕೆ ಕರೆದು ಏಕಾಂತದಲ್ಲಿ ಒಂದು ರಹಸ್ಯವಾದ ವೃತ್ತಾಂತವನ್ನು ತಿಳಿಸಿದರು. " ಎಲೈ ಶಾಸ್ತ್ರಸಂಪನ್ನನಾದ ಮಹಾಭಾಗ್ಯಶಾಲಿಯೇ! ನೀನು ನನಗೆ ಉಪಕಾರಿಯು. ನಾನು ನಿನಗೆ ಉಪಕೃತನು. ಇದು ಹೇಗೆಂದು ತಿಳಿಸುವುದಕ್ಕಾಗಿ ಈಗ ನಿನಗೆ ದಯನೀಯನೊಬ್ಬನ ಕರುಣಕಥೆಯನ್ನು ವಿವರಿಸುವೆನು. ಕೇಳು. ಹಿಂದೆ ವಿದ್ಯಾಧರ ಲೋಕದಲ್ಲಿ ಲೋಕಪಾಲನೆಂಬ ಅರಸನಿದ್ದನು. ಅವನೊಮ್ಮೆ ಆಕಾಶಮಾರ್ಗವಾಗಿ ಹೋಗುತ್ತಿದ್ದನು. ಆಗ ಐಶ್ವರ್ಯದ ಅಸ್ಥಿರತೆ

ಯನ್ನು ತಿಳಿಸಲೆಂಬಂತೆ ಮೆರೆಯುತ್ತಿದ್ದ ಮೋಡವೊಂದು ನೋಡುತ್ತಿದ್ದಂತೆ ಕರಗಿ ಕಣ್ಮರೆಯಾಯಿತು. ಇದನ್ನು ನೋಡಿ ಅರಸನಲ್ಲಿ ವೈರಾಗ್ಯವಂಕು ರಿಸಿತು. ಒಡನೆ ಪುತ್ರನಿಗೆ ರಾಜ್ಯಭಾರವನ್ನೊಪ್ಪಿಸಿ ಅತಿ ಕಠಿಣವಾದ ಜಿನ ದೀಕ್ಷೆಯನ್ನಂಗೀಕರಿಸಿದನು. ತಪಸ್ವಿಯಾದನು. ಆದರೆ ತಪಸ್ಸು ಮಾಡು ತ್ತಿದ್ದ ಆ ಲೋಕಪಾಲನಿಗೆ ಎಷ್ಟು ಉಂಡರೂ ಅದನ್ನು ಕ್ಷಣದಲ್ಲಿ ಭಸ್ಮ ಮಾಡುವಂತಹ ಭಸ್ಮಕವೆಂಬ ಪ್ರಬಲರೋಗವು ಉಂಟಾಯಿತು. ಇದು ಆತನ ತಪಸ್ಸನ್ನು ಕೆಡಿಸಿತು. ರಾಜ್ಯದಂತೆ ತಪಸ್ಸನ್ನೂ ತ್ಯಜಿಸಿದನು. "ಶ್ರೇಯಾಂಸಿ ಬಹು ವಿಘ್ನಾನಿ" ಎಂಬ ನೀತಿಯು ಈ ಲೋಕಪಾಲನಲ್ಲಿ ಸರಿ ಹೋಯಿತು. ಈತನು ತಪೋನಿಯಮವನ್ನಾಚರಿಸಲಾರದೆ ಸ್ವೇಚ್ಛಾಚಾರಿ ಯಾಗಿ ಸಂಚರಿಸುತ್ತಿದ್ದನು. ಗಂಧೋತ್ಕಟ ಶ್ರೇಷ್ಠಿಯು ಸದಾ ಧರ್ಮಿ ಷ್ಠರ ಇಚ್ಛೆಯನ್ನು ನೆರವೇರಿಸತಕ್ಕವನು ಧರ್ಮಿಷ್ಠರಿಗೆ ಧರ್ಮಿಷ್ಠರೇ ಶರಣ್ಯರಲ್ಲವೆ!"

ಒಂದು ದಿನ ಲೋಕಪಾಲನು ಭೋಜನೇಚ್ಛೆಯಿಂದ ಈ ಶ್ರೇಷ್ಠಿ ಯಲ್ಲಿಗೆ ಬಂದನು. ಭೋಜನಕ್ಕೆ ಸಿದ್ಧನಾಗಿ ಕುಳಿತ ನಿನ್ನನ್ನು ಕಂಡನು. ನೀನೂ ಅವನನ್ನು ನೋಡಿದೆ. ಅವನ ಹಸಿವನ್ನು ತಿಳಿದೆ. ಒಡನೆ ಮುನಿಗೆ ಮೊದಲು ಭೋಜನ ಮಾಡಿಸೆಂದು ಅಡಿಗೆಯವನಿಗೆ ಅಪ್ಪಣೆ ಗೊಟ್ಟೆ. ಅಡಿಗೆಯವನು ನಿನ್ನ ಅಪ್ಪಣೆಯಂತೆ ಮುನಿಗೆ ಉಂಡಂತೆ ಬಡಿಸುತ್ತಾ ಪಾಕಶಾಲೆಯಲ್ಲಿದ್ದುದೆಲ್ಲವನ್ನೂ ತಂದಿಕ್ಕಿದನು. ಆದರೂ ಮುನಿಯ ಹೊಟ್ಟೆಯು ತುಂಬಲಿಲ್ಲ. ಆಶಾಸಮುದ್ರವು ಯಾವುದರಿಂದ ತುಂಬೀತು! ಇದೆಲ್ಲವನ್ನೂ ಆಶ್ಚರ್ಯದಿಂದ ಉಣ್ಣದೇ ಕುಳಿತು ನೋಡುತ್ತಿದ್ದ ನೀನು ಅವನಲ್ಲಿ ಕರುಣೆಗೊಂಡು ಕೈಯಲ್ಲಿದ್ದ ತುತ್ತನ್ನು ಸಂತೋಷದಿಂದ ಆತನಿಗೆ ಕೊಟ್ಟುಬಿಟ್ಟೆ. ಅದನ್ನ ಉಣ್ಣುತ್ತಲೇ ಆಶಾಸಮುದ್ರವು ವೈರಾಗ್ಯ ದಿಂದ ಪೂರ್ಣಗೊಳ್ಳುವಂತೆ ಅವನ ಹೊಟ್ಟೆಯು ತುಂಬಿತು. ತೃಪ್ತನಾದ ಆತನು ನಿನಗೆ ಮಾಡಬೇಕೆಂದಿರುವ ಪ್ರತ್ಯುಪಕಾರದ ವಿಷಯವಾಗಿ ತನ್ನಲ್ಲಿ ಹೀಗೆ ಚಿಂತಿಸತೊಡಗಿದನು. ಪುರುಷಾರ್ಥಗಳಲ್ಲಿ ಧರ್ಮವೇ ಮೊದಲಿನದು. ಇದರಿಂದ ಸರ್ವಪುರುಷಾರ್ಥಗಳೂ ಸಿದ್ಧಿಸುವುವು. ಇಂತಹ ಧರ್ಮದ ಸ್ವರೂಪ, ಆಚರಣ ವಿಧಾನ, ಮೊದಲಾದುವು ತಿಳಿಯಬೇಕಾದರೆ ವಿದ್ಯೆಯು

ಬೇಕು. ವಿದ್ಯೆಗೆ ಧರ್ಮವೇ ಮುಖ್ಯವಾದ ಫಲ. ವಿದ್ಯೆಯನ್ನು ಕೊಟ್ಟರೆ ಅದು ಪಡೆದಾತನಲ್ಲೇ ಇದ್ದು ವೃದ್ಧಿ ಹೊಂದುವುದು. ಇದನ್ನು ಕಳ್ಳರು ಕದಿಯಲಾರರು. ವಿದ್ಯೆಯಿದ್ದರೆ ಮಾನವಿದೆ ವೈಭವವಿದೆ ಕುಲವಿದೆ. ವಿದ್ವಾಂಸನು ಸರ್ವತ್ರ ಪೂಜ್ಯನಾಗುತ್ತಾನೆ. ಆದುದರಿಂದ ಈ ಉಪಕಾರಿಗೆ ವಿದ್ಯೆಯನ್ನೀಯುವುದೇ ಉತ್ತಮವಾದ ಪ್ರತ್ಯುಪಕಾರವು" ಎಂದು ನಿಶ್ಚಯಿಸಿ ಚಿರಂಜೀವಿಯಾದ ನಿನ್ನನ್ನು ವಿದ್ವಾಂಸನನ್ನಾಗಿ ಮಾಡಿದನು. ಆ ಮುನಿಯೇ ನಾನೆಂದು ತಿಳಿ" ಎಂದು ನುಡಿದನು.

ಜೀವಂಧರನು ಗುರುವಂಶ ಪಾರಿಶುದ್ಧ್ಯಾದಿಗಳನ್ನು ತಿಳಿಸುವ ಈ ವೃತ್ತಾಂತವನ್ನು ಮೌನದಿಂದಿದ್ದು ಕೇಳಿದನು. ತನಗಾದ ಹರ್ಷವನ್ನು ಮುಖಭಾವದಿಂದ ಸೂಚಿಸಿದನು. ಬಳಿಕ ಆ ಆರ್ಯನಂದಾಚಾರ್ಯರು ಶಿಷ್ಯನಾದ ಜೀವಂಧರನಿಗೆ ಗುರುಶಿಷ್ಯರ ಲಕ್ಷಣಗಳನ್ನೂ ಅವರೊಳಗಿನ ಸಂಬಂಧವನ್ನೂ ಅವರವರ ಕರ್ತವ್ಯಗಳನ್ನೂ ಗೃಹಸ್ಥಧರ್ಮವನ್ನೂ ಒಂದೊಂದಾಗಿ ವಿವರಿಸಿದರು. ಕೊನೆಗೆ ಶಿಷ್ಯನ ವಂಶಪಾರಿಶುದ್ಧ್ಯವನ್ನೂ ತಿಳಿಸುವ ಇಚ್ಛೆಯುಳ್ಳವರಾಗಿ "ಮಗುವೇ! ನೀನು ರಾಜಪುರಿ ಪಟ್ಟಣದ ಅರಸನಾದ ಸತ್ಯಂಧರನ ಪುತ್ರನು. ವಿಜಯಾಮಹಾದೇವಿಯೇ ನಿನ್ನನ್ನು ಹಡೆದವಳು. ಈಗ ಸರ್ವಾಧಿಕಾರಿಯಾಗಿರುವ ಈ ಕಾಷ್ಠಾಂಗಾರನೇ ನಿನ್ನ ತಂದೆಯನ್ನು ಕೊಂದವನು" ಎಂದು ಮುಂತಾಗಿ ವಿವರಿಸಿದರು.

ಕಾಷ್ಠಾಂಗಾರನು ದ್ರೋಹಿಯೆಂದು ತಿಳಿದುದೇ ತಡ! ಜೀವಂಧರನು ಕೋಪದಿಂದ ಕಿಡಿಕಿಡಿಯಾಗಿ ಆತನ ಸಂಹಾರಕ್ಕೆ ಸಿದ್ಧನಾದನು. ಇದನ್ನು ಕಂಡ ಆರ್ಯನಂದ್ಯಾಚಾರ್ಯರು ಶಿಷ್ಯನನ್ನು ಈ ಹಿಂಸಾಕೃತ್ಯದಿಂದ ನಿವರ್ತಿಸುವುದಕ್ಕೆ ಬಹಳವಾಗಿ ಯತ್ನಿಸಿದರು. ಪ್ರಯೋಜನವಾಗಲಿಲ್ಲ. ಕೊನೆಗೆ "ಎಲೈ ಜೀವಂಧರಾ! ಒಂದು ವರ್ಷ ಕಾಲವಾದರೂ ವಿರೋಧಿಯನ್ನು ಕ್ಷಮಿಸು. ಈ ಕ್ಷಮೆಯೇ ನನಗೆ ಗುರುದಕ್ಷಿಣೆಯಾಗಲಿ" ಎಂದು ನುಡಿದರು. ಜೀವಂಧರನು ಇದಕ್ಕೊಪ್ಪಿದನು.

ಶಿಷ್ಯನ ಕೋಪಸಾರವಶ್ಯವನ್ನು ನೋಡಿದ ಗುರುಗಳು ತಾನು ವಿವರಿಸಿದ ಈತನ ವಂಶಚರಿತ್ರವು ಇವನ ಯೋಗ್ಯತಾಪರೀಕ್ಷೆಗೆ ಸಾಧನವಾಯಿತು.

ಇವನಿಗೆ ವಿವೇಕಬೋಧೆಯು ಇನ್ನೂ ಅವಶ್ಯವಿದೆ ಎಂದು ಭಾವಿಸಿ ಮತ್ತೆ ಉಪದೇಶಕ್ಕೆ ತೊಡಗಿದರು. “ಎಲೈ ಪುತ್ರನೇ! ಅಜ್ಞಾನದಿಂದ ಪರವಶನಾಗಿ ಏಕೆ ಕೋಪಾದಿವಿಕಾರಕ್ಕೆ ಒಳಗಾದೆ? ಕೋಪಿಸಿಕೊಳ್ಳುವುದಕ್ಕೆ ಕಾರಣವಿದ್ದರೂ ನಿರ್ವಿಕಾರನಾಗಿರುವುದೇ ಧೀರತನದ ಲಕ್ಷಣ. ಕೋಪವೆಂಬುದು ಅಂತಶ್ಶತ್ರುವಾಗಿದೆ. ತನ್ನಾಶ್ರಯವನ್ನೇ ದಹಿಸುವ ಕೋಪಾಗ್ನಿಯನ್ನು ಪ್ರಾಜ್ಞರು ಪರಿತ್ಯಜಿಸಲೇಬೇಕು. ಶಾಸ್ತ್ರಾಭ್ಯಾಸ ಮಾಡಿಯೂ ಗ್ರಾಹ್ಯಾಗ್ರಾಹ್ಯ ವಿವೇಕವು ಉಂಟಾಗದಿದ್ದರೆ ಆ ಅಭ್ಯಾಸವು ವ್ಯರ್ಥ ಶ್ರಮವಾಗುವುದು. “ಪಾಣೌ ಕೃತೇನ ದೀಪೇನ ಕಿಂ ಕೂಪೇ ಪತತಾಂ ಫಲಂ” ಎಂಬಂತೆ ದೀಪ ಹಿಡಿದಿದ್ದೂ ಬಾವಿಯಲ್ಲಿ ಬಿದ್ದರೆ ದೀಪವಿದ್ದು ಪ್ರಯೋಜನವೇನಾಯಿತು? ಶಾಸ್ತ್ರಜ್ಞನಾದ ನೀನು ಶಾಸ್ತ್ರವಿರುದ್ಧವಾದ ಕರ್ಮವನ್ನು ಮಾಡುವುದು ಉಚಿತವಲ್ಲ. ಮಗುವೇ! ನೀನು ದುರ್ಜನರನ್ನು ಸರ್ಪಸದೃಶರನ್ನಾಗಿ ತಿಳಿ. ಅವರಿಂದ ದೂರವಾಗಿರು. ಸರ್ಪ ಕಚ್ಚಿದರೆ ಶರೀರವು ಮಾತ್ರ ನಾಶವಾಗುವುದು. ದುರ್ಜನರ ಸಹವಾಸವು ಕುಲ, ಮಹಿಮೆ, ಪಾಂಡಿತ್ಯ, ಕೀರ್ತಿ ಮೊದಲಾದುವನ್ನೆಲ್ಲಾ ಕ್ಷಣದಲ್ಲಿ ನಾಶಮಾಡುವುದು. ಸತ್ಪುರುಷರು ಪ್ರಯತ್ನಪಟ್ಟಾದರೂ ಸತ್ಪುರುಷರನ್ನೇ ಸಂಪಾದಿಸಬೇಕು. ಆದರೆ ಅವರು ರತ್ನದಂತೆ ಅತ್ಯಂತ ದುರ್ಲಭರು. ಸತ್ಪುರುಷರ ವಚನವು ಅಮೃತಕ್ಕಿಂತಲೂ ಗುಣಾತಿಶಯವುಳ್ಳದು. ಇದರಿಂದ ಜಾಗೃತವೂ ಸೌಮನಸ್ಯವೂ ಉಂಟಾಗುವುದು.”

..ಯೌವನ, ಬಲ, ಸಂಪತ್ತು ಇವುಗಳಲ್ಲಿ ಒಂದೊಂದಿದ್ದರೂ ಎಷ್ಟೋ ಅನರ್ಥಗಳನ್ನುಂಟುಮಾಡುವುದು ಎಲ್ಲವೂ ಸೇರಿದ್ದರೆ ಮತ್ತೆ ಕೇಳಬೇಕೆ? ಆದರೆ ವಿವೇಕಿಯು ಇವುಗಳಿದ್ದೂ ವಿಕಾರಕ್ಕೊಳಗಾಗನು. ದೇಶ ವಿಶೇಷದಿಂದಲೂ, ಕಾಲವಿಶೇಷದಿಂದಲೂ, ದುರ್ಜನ ಸಹವಾಸದಿಂದಲೂ ಒಳ್ಳೆಯ ಬುದ್ಧಿ ಕೂಡ ಕೆಟ್ಟುಹೋಗುವುದೆಂದು ಬಲ್ಲವರು ಹೇಳುತ್ತಾರೆ. ಆದರೆ ಧರ್ಮದಲ್ಲಿ ಸ್ಥಿರವಾಗಿದ್ದ ಬುದ್ಧಿಯನ್ನು ಇವುಗಳಾವುವೂ ಕೆಡಿಸಲಾರವು. ನಮ್ಮ ಚಂಚಲ ಬುದ್ಧಿಯೇ ನಮ್ಮನ್ನು ಬಾಧಿಸುವುದು. ಪುಣ್ಯಹೀನನಿಗೆ ಎಷ್ಟು ಉಪದೇಶ ಮಾಡಿದರೂ ಧರ್ಮಬುದ್ಧಿಯುಂಟಾಗುವುದಿಲ್ಲ. ಭವ್ಯ ಜೀವಿಯಲ್ಲಿ ಮಾತ್ರ ಅದು ವೃದ್ಧಿ ಹೊಂದುತ್ತದೆ. ಧರ್ಮದಲ್ಲಿ

ಬುದ್ಧಿಯು ನೆಲೆಗೊಳ್ಳುವುದಕ್ಕೆ ಸುಕೃತವೇ ಮುಖ್ಯ ಕಾರಣವು. ಆತ್ಮನೇ ತನಗೆ ಗುರು. ಧನಮದವುಳ್ಳವರು ಸತ್ಪುರುಷರ ವಚನವನ್ನು ಕೇಳರು. ಸನ್ಮಾರ್ಗವನ್ನು ಆಶ್ರಯಿಸರು ಆಶ್ರಯಿಸಿದರೂ ಫಲಪ್ರಾಪ್ತಿಯ ವರೆಗೆ ಅನುಸರಿಸರು." ಎಂದೀ ರೀತಿಯಾಗಿ ಆರ್ಯನಂದ್ಯಾಚಾರ್ಯರು ಜೀವಂಧರನಿಗೆ ವಿವೇಕಬೋಧೆಯನ್ನು ಮಾಡಿದರು.

ಬಳಿಕ ತನ್ನ ಅಗಲಿಕೆಗೊಳುವ ಶಿಷ್ಯನನ್ನು ಸಂತಯಿಸಿ ತಪಸ್ಸಿಗೆ ನಡೆದರು. ದೀಕ್ಷೆಯನ್ನಂಗೀಕರಿಸಿ ತಪೋಬಲದಿಂದ ಮೋಕ್ಷಾನಂದವನ್ನು ಪಡೆದರು. ಜ್ಞಾನದಾನ ಮಾಡುವ ಗುರುವಿಗಿಂತ ಉತ್ತಮ ಉಪಕಾರಿಯಿಲ್ಲ. ಜನ್ಮಕೊಟ್ಟ ತಾಯಿತಂದೆಗಳಿಗಿಂತಲೂ ಉತ್ತಮನು. ಇಂತಹ ಗುರೂತ್ತಮನ ಅಗಲಿಕೆಯಿಂದ ಜೀವಂಧರನು ಬಹಳವಾಗಿ ಸಂತಾಪಗೊಂಡವನಾದರೂ ಶಾಸ್ತ್ರಜನ್ಯವಾದ ಯಥಾರ್ಥಜ್ಞಾನವೆಂಬ ಜಲದಿಂದ ಆದನ್ನಾರಿಸಿಕೊಂಡನು. ಮುಂದೆ ತನ್ನ ಉತ್ತಮ ವಿದ್ಯೆಯಿಂದ ವಿದ್ವಾಂಸರ ಮನಸ್ಸನ್ನೂ ಸೌಂದರ್ಯದಿಂದ ಸ್ತ್ರೀಯರ ಮನಸ್ಸನ್ನೂ ಆಕರ್ಷಿಸುವವನಾಗಿ ಮೆರೆಯುತ್ತಿದ್ದನು.

## ವಿಜಯಾರಂಭ

ಜೀವಂಧರನು ಹೀಗೆ ರೂಪ ಯೌವನ ವಿದ್ಯಾಸಂಪತ್ತುಗಳಿಂದ ಮೆರೆಯುತ್ತಿರಲು ಒಂದು ದಿನ ಬೇಡರ ಅಪಹರಣ ಕೃತ್ಯದಿಂದ ತಮ್ಮ ಗೋವುಗಳನ್ನು ಕಳಕೊಂಡು ಹಾನಿಗೊಳಗಾದ ಕೆಲವರು ಗೊಲ್ಲರು ಅರಮನೆಗೆ ಬಂದು, ಕಾಷ್ಠಾಂಗಾರನಿಗೆ ಮೊರೆಯಿಟ್ಟರು. ಕಾಷ್ಠಾಂಗಾರನು ಇವರ ಮೊರೆಯನ್ನು ಕೇಳಿದನು ಅಲ್ಪರಿಂದಾದ ಅಪಮಾನವನ್ನು ಸಹಿಸದಾದನು. ಬೇಡರಲ್ಲಿ ಅತ್ಯಂತ ಕೋಪಗೊಂಡವನಾಗಿ "ನಡೆಯಿರಿ ಆ ಮೂರ್ಖರನ್ನು ಈಗಲೇ ಸಂಹರಿಸಿ ಈ ಗೊಲ್ಲರ ಗೋಧನವನ್ನು ಸಂರಕ್ಷಿಸಿರಿ." ಎಂದು ಸೈನ್ಯಕ್ಕೆ ಅಪ್ಪಣೆಗೊಟ್ಟು ಅಟ್ಟಿದನು. ಸೈನ್ಯವು ಸಾಗಿತು ಆದರೆ ಬೇಡರಿಂದ ಪರಾಜಿತವಾಗಿ ಹಿಂತಿರುಗಿತು. "ಸ್ವದೇಶೇಹಿ ಶಶ: ಪ್ರಾಯೋ ಬಲಿಷ್ಠ:

ಕುಂಜರಾದಪಿ" ಎಂಬಂತೆ ಸ್ವಸ್ಥಾನದಲ್ಲಿದ್ದ ಮೊಲವಾದರೂ ಆನೆಗಿಂತ ಬಲಿಷ್ಠವಾದುದಲ್ಲವೇ? ಸೈನ್ಯವು ಪರಾಜಿತವಾದುದನ್ನು ತಿಳಿದು ಗೊಲ್ಲರ ಹಳ್ಳಿಯೇ ನಡುಗಿತು.

ಆಗ ನಂದಗೋಪನೆಂಬೊಬ್ಬ ಗೊಲ್ಲನು ಬೇಡರ ಬಾಧೆಯಿಂದ ಪಾರಾಗಲು ಉಪಾಯವನ್ನು ಚಿಂತಿಸುವವನಾಗಿ ತನ್ನವರೊಡನೆ "ಸಹೋದರರೇ! ಲೋಕದಲ್ಲಿ ಧನಸಂಪಾದನೆಯೆಂಬುದೇ ಕ್ಲೇಶವು. ಅದಕ್ಕಿಂತಲೂ ಸಂಪಾದಿಸಿದುದನ್ನು ರಕ್ಷಿಸಿಕೊಳ್ಳುವುದು ಅತಿಕ್ಲೇಶವು. ರಕ್ಷಿಸಿದ್ದೂ ನಷ್ಟವಾದರೆ ಅದು ಅಸಹನೀಯವಾದ ಕ್ಲೇಶವಾಗುವುದು. ಈ ದ್ರವ್ಯದಿಂದ ಲೇಶ ಮಾತ್ರವೂ ಸುಖವಿಲ್ಲ. ಆದರೂ ಇದು ಇಹಲೋಕ ಜೀವನಕ್ಕೆ ಸಾಧನವಾದುದರಿಂದ ಸಂಪಾದನೀಯವು. ಇದು ನಷ್ಟವಾದರೆ ಪುನಃ ಪಡೆಯಲು ಸಾಮರ್ಥ್ಯಕ್ಕೆ ತಕ್ಕಂತೆ ಯತ್ನವನ್ನು ಮಾಡಲೇಬೇಕು. ಪ್ರಯತ್ನವು ಒಮ್ಮೆ ನಿಷ್ಫಲವಾಯಿತೆಂದು ದುಃಖಿಸಬಾರದು ಹಾಗೆ ದುಃಖಿಸದಿರುವುದೇ ಒಂದು ರೀತಿಯಲ್ಲಿ ಪ್ರತೀಕಾರವೆನಿಸುವುದು. ಆದುದರಿಂದ ಈಗ ನಮಗೊದಗಿದ ಹಾನಿಗಾಗಲಿ ಅಪಜಯಕ್ಕಾಗಲಿ ನಾವು ದುಃಖಿಸಬಾರದು. ಪ್ರಕೃತ ನಮ್ಮ ಈ ಗೋಧನ ಪುನಃ ಪ್ರಾಪ್ತಿಗಾಗಿ ನಾನೊಂದು ಉಪಾಯವನ್ನು ಕಂಡಿರುವೆನು. ಅದೇನೆಂದರೆ ಬೇಡರ ಪಡಿಯನ್ನು ಪರಾಜಿತಗೊಳಿಸಿ ನಮ್ಮ ಗೋಧನವನ್ನು ತಂದೊಪ್ಪಿಸುವ ವೀರನಿಗೆ ಏಳು ಸುವರ್ಣ ಪ್ರತಿಮೆಗಳ ಸಹಿತವಾಗಿ ನನ್ನ ಮುದ್ದು ಮಗಳನ್ನು ಒಪ್ಪಿಸಿ ಬಿಡುವ ನಿಶ್ಚಯ ಮಾಡಿರುವೆನು. ಇದೇ ಆ ಉಪಾಯವು. ನನ್ನೀ ನಿಶ್ಚಯವನ್ನು ಪಟ್ಟಣದಲ್ಲೆಲ್ಲಾ ಸಾರಿ ಬನ್ನಿರಿ" ಎಂದು ಅಭಯಪೂರ್ವಕವಾದ ಆದೇಶವನ್ನಿತ್ತನು. ಗೊಲ್ಲರು ತಮ್ಮ ಗುರಿಕಾರನ ಸೂಚನೆ ಗಸ್ತು ಗೊಟ್ಟರು. ಆದೇಶದಂತೆ ಡಂಗುರ ಸಾರುತ್ತ ಹೊರಟರು. ಈ ಘೋಷಣೆಯನ್ನು ಕೇಳಿದ ಜೀವಂಧರನು ಇವರನ್ನು ತಡೆದು ವಿಚಾರಿಸಿದನು. ಇವರ ಕಷ್ಟಕ್ಕೆ ಕನಿಕರಗೊಂಡನು. ಕಳೆದುಹೋದ ಗೋಧನವನ್ನು ನಿಮಗೊಪ್ಪಿಸಿ ಕೊಡುವೆನೆಂದು ಭಾಷೆಗೊಟ್ಟು ಬೇಡರನ್ನು ಜಯಿಸುವುದಕ್ಕಾಗಿ ಹೊರಟನು.

"ತಮೋಽಹ್ಯಭೇದ್ಯಂ ಖದ್ಯೋತೈರ್ಭಾನುನಾತು ವಿಭಿದ್ಯತೆ"- ಮಿಣುಕು ಹುಳುಗಳಿಂದ ಕತ್ತಲೆಯು ನಾಶಹೊಂದದಿದ್ದರೂ ಸೂರ್ಯನೆದುರು ನಿಲ್ಲ

ಲಾರದಷ್ಟೆ! ಜೀವಂಧರನೊಡನೆ ಹೋರಾಟಕ್ಕೆ ನಿಂತ ಬೇಡರ ಸೈನ್ಯವು ಕ್ಷಣದಲ್ಲಿ ಸೋತು ಸುಣ್ಣವಾಯಿತು. ಜೀವಂಧರನು ಗೋವುಗಳನ್ನು ಹಿಂದಿರುಗಿಸಿ ಗೊಲ್ಲರಿಗೊಪ್ಪಿಸಿದನು. ನಂದಗೋಪನ ಆನಂದಕ್ಕೆ ಮೆರೆಯಿಲ್ಲದಾಯಿತು. ತಾನು ಘೋಷಿಸಿದಂತೆ ಮಗಳನ್ನು ತಂದು ಜೀವಂಧರನಿಗೆ ಒಪ್ಪಿಸಿದನು. ಆದರೆ "ನಹ್ಯಯೋಗ್ಯೇ ಸ್ಪೃಹಾಸತಾಂ" ಸತ್ಪುರುಷರು ತಮಗೆ ತಕ್ಕುದಲ್ಲದ ವಸ್ತುವಿನಲ್ಲಿ ಆಶೆಯನ್ನಿಡಲಾರರಷ್ಟೆ! "ಈಕೆಯನ್ನು ನಾನು ನನಗಾಗಿ ಸ್ವೀಕರಿಸಲಾರೆನು. ನನ್ನ ಗೆಳೆಯನಾದ ಪದ್ಮಾಸ್ಯನಿಗಾಗಿ ಪರಿಗ್ರಹಿಸುವೆನು. ಆತನನ್ನು ನಾನೇ ಎಂಬುದಾಗಿ ತಿಳಿ" ಎಂದು ನಂದಗೋಪನನ್ನೊಡಂಬಡಿಸಿ ಆಕೆಯನ್ನು ಪರಿಗ್ರಹಿಸಿದನು. ನಂದಗೋಪನೂ ಅದಕ್ಕೊಪ್ಪಿದನು. ಸಂತುಷ್ಟನಾದ ಪದ್ಮಾಸ್ಯನೂ ನಂದಗೋಪ ಗೋದಾವರಿಯರ ಪುತ್ರಿಯಾದ "ಗೋವಿಂದಾ" ಎಂಬವಳನ್ನು ಅಗ್ನಿಸಾಕ್ಷಿಯಾಗಿ ವಿವಾಹ ಮಾಡಿಕೊಂಡನು. ಜೀವಂಧರನು ಜಯಲಕ್ಷ್ಮಿಯನ್ನೇ ಕೈಹಿಡಿದನು.

## ಗಂಧರ್ವದತ್ತೆಯ ಸ್ವಯಂವರ

ವಿಜಯವಿಖ್ಯಾತನಾದ ಜೀವಂಧರನ ರೂಪ, ಯೌವನ, ವಿದ್ಯಾ, ವಿನಯ, ಪರೋಪಕಾರ, ಪರಾಕ್ರಮಾದಿ ಗುಣಗಳು ಹೆಣ್ಣು ಹೆತ್ತ ಭೂಚರ ಖೇಚರರೆಲ್ಲರನ್ನೂ ಭ್ರಾಂತರನ್ನಾಗಿ ಮಾಡಿದುವು. ಎಲ್ಲರ ಕಿವಿ ಬಾಯಿಗಳಲ್ಲಿಯೂ ಜೀವಂಧರನ ವೃತ್ತಾಂತವೇ ನಲಿದಾಡಿತು.

ಆ ರಾಜಪುರಿ ಪಟ್ಟಣದಲ್ಲಿ ಶ್ರೀದತ್ತನೆಂಬ ವೈಶ್ಯನೊಬ್ಬನಿದ್ದನು. ಆತನಿಗೆ ಪಿತ್ರಾರ್ಜಿತ ಸಂಪತ್ತು ಧಾರಾಳವಾಗಿತ್ತು. ಆದರೂ ಆತನು ನಿಷ್ಕ್ರಿಯನಾಗಿರಲು ಮನವೊಪ್ಪದೆ ತನ್ನಲ್ಲೇ ಸಂಪತ್ತನ್ನು ಕಾಪಾಡಲಿಚ್ಛಿಸುವವನು ಕೂತುಣ್ಣುವುದು ಉಚಿತವಲ್ಲ. ಪರಾನ್ನ ಜೀವನವು ಸಮರ್ಥನಿಗೆ ಮಾನ್ಯವೂ ಅಲ್ಲ. ಆದಾಯವಿಲ್ಲದ ವ್ಯಯಕ್ಕೆ ದಾರಿದ್ರ್ಯವೇ ಫಲ. ದಾರಿದ್ರ್ಯವೆಂಬುದು ಜೀವಿಗೆ ಪ್ರಾಣ ಹೋಗದಿರುವ ಮರಣವೇ ಸರಿ. ಸದ್ವ್ಯಯವೇ ಸಂಪತ್ತಿನ ಫಲ. ಆದುದರಿಂದ ನನ್ನ ಕುಲವೃತ್ತಿಯಾದ ವ್ಯಾಪಾರವನ್ನು ಮಾಡುವೆನು"

ಎಂದು ಚಿಂತಿಸಿ ವ್ಯಾಪಾರ ಮಾಡುವ ಉದ್ದೇಶದಿಂದ ಹಡಗನ್ನೇರಿ ದ್ವೀಪಾಂತರಕ್ಕೆ ಪ್ರಯಾಣ ಮಾಡಿದನು. ಅಲ್ಲಿ ವ್ಯಾಪಾರದಿಂದ ಹೇರಳ ದ್ರವ್ಯವನ್ನು ಸಂಪಾದಿಸಿ ಸ್ವದೇಶಕ್ಕೆ ಮರಳಲಿಚ್ಛಿಸಿದನು

ಹಡಗವು ಹೊರಟಿತು. ಸಮುದ್ರವನ್ನು ಹಾಯ್ದು ದಡವನ್ನು ಸಮೀಪಿಸಿತು. ಆದರೆ ''ನಹಿವೇದ್ಯೋ ವಿಪತ್ಕಣಃ" ಎಂಬಂತೆ ಈ ಲೋಕದಲ್ಲಿ ತಮಗೆ ಯಾವ ಕ್ಷಣಕ್ಕೆ ಏನು ವಿಪತ್ತು ಬರುವುದೋ ಬಲ್ಲವರಾರು? ಹಡಗು ದಡ ಸೇರಿದೆ. ಇನ್ನೊಂದು ಕ್ಷಣದಲ್ಲಿ ಅದರಲ್ಲಿದ್ದವರು ಕೆಳಕ್ಕಿಳಿಯಬೇಕು. ಅಷ್ಟರಲ್ಲಿ ಹೊಡೆಯಿತು ಗಾಳಿಮಳೆ. ನೌಕೆಯು ನಡುಗಿತು. ಹುಚ್ಚುಹಿಡಿದಂತೆ ಕಂಡಬಟ್ಟೆಯಲ್ಲಿ ಹರಿಯಿತು. ಅಗಾಧ ಜಲಧಿಯಲ್ಲಿ ಮುಳುಗಿತೋ ಮುಳುಗಿತು ಎನ್ನುವಂತಾಯಿತು. ಹಡಗು ಮುಳುಗಲಿಲ್ಲ. ಏರಿದ್ದವರು ಶೋಕಸಾಗರದಲ್ಲಿ ಮುಳುಗದಿರಲಿಲ್ಲ. ಇಷ್ಟಾದರೂ ಶ್ರೀದತ್ತನಿನ್ನೂ ಧೈರ್ಯದಿಂದಲೇ ಇದ್ದನು. ಅಡಿಗಡಿಗೆ ತನ್ನವರಿಗೆ ''ಎಲೈ ವಿವೇಕಿಗಳಿರಾ! ಆಪತ್ತು ಬಂದೀತೆಂದು ಅಳಬೇಡಿರಿ. ವಿಪತ್ತಿಗೆ ಪ್ರತಿಕ್ರಿಯೆಯು ಧೈರ್ಯವಲ್ಲದೆ ಶೋಕವಲ್ಲ. ವಿವೇಕಿಗಳಾದ ನೀವು ತತ್ವವಿಚಾರ ಮಾಡಿರಿ. ಮೂಢರಂತೆ ಶೋಕಿಸಬೇಡಿರಿ" ಎಂದು ಧೈರ್ಯಗೊಡುತ್ತಿದ್ದನು. ಹೀಗೆ ಆತನು ಧೈರ್ಯಗೊಡುತ್ತಿದ್ದಂತೆ ಹಡಗು ಮುಳುಗಿತು ಎಲ್ಲರೂ ನೀರು ಪಾಲಾದರು ಶ್ರೀದತ್ತನು ಜಲರಾಶಿಯಲ್ಲಿ ಮುಳುಗೇಳುತ್ತಿದ್ದಾನೆ. ಆಗ ಅದೃಷ್ಟವಶದಿಂದ ಅವನ ಕೈಗೆ ಮರದ ತುಂಡೊಂದು ಸಿಕ್ಕಿತು. ''ಸತ್ಯಾಯುಷಿ ಹಿ ಜಾಯೇತ ಪ್ರಾಣಿನಾಂ ಪ್ರಾಣರಕ್ಷಣಂ" ಆಯುಸ್ಸೊಂದಿದ್ದರೆ ಹೇಗಾದರೂ ಪ್ರಾಣ ಸಂರಕ್ಷಣೆಯಾಗುತ್ತದೆ. ಕೈಗೆ ಸಿಕ್ಕಿದ ಆ ಮರದ ತುಂಡನ್ನಾದರಿಸಿ ದ್ವೀಪವೊಂದನ್ನು ಸೇರಿದನು. ಪ್ರಾಣ ಉಳಿದ ಸಂತೋಷದಿಂದ ಧನವಳಿದ ಚಿಂತೆಯೇ ಮನಸ್ಸಿಗೆ ಬರಲಿಲ್ಲ. ಈಯೊಂದು ಘಟನೆಯು ಆತನ ವಿವೇಕೋದಯಕ್ಕೆ ಕಾರಣವಾಯಿತು. "ಅಯ್ಯೋ! ಈ ಆಶೆಯೆಂಬುದು ಅಗ್ನಿಸಮಾನವಾದುದು. ಇಹಪರಗಳೆರಡರ ಸುಖವನ್ನೂ ಇದು ದಹಿಸಿಬಿಡುವುದು. ಆದುದರಿಂದ ಸುಖಾಭಿಲಾಷಿಯು ಆಶೆಯನ್ನು ತ್ಯಜಿಸಲೇಬೇಕು. ತ್ಯಜಿಸದಿದ್ದರೆ ಹಣ್ಣಿನಾಸೆಯಿಂದ ಮರವನ್ನೇ ಕಡಿದಂತಾಗುವುದು ಈ ಕಾರಣದಿಂದಲೇ ಯೋಗಿಶ್ರೇಷ್ಠರು ಇಂದ್ರೈಶ್ವ

ರ್ಯಕ್ಕೆ ಸಮಾನವಾದ ಷಟ್ಖಂಡಾಧಿಪತ್ಯವನ್ನು ಸಹ ಬಿಟ್ಟು ಮೋಕ್ಷಕ್ಕಾಗಿ ತಪಸ್ಸನ್ನಾಚರಿಸುತ್ತಾರೆ. ಅಂತಹ ಮಹಾತ್ಮರ ಮಾರ್ಗವೇ ನನಗೆ ಶರಣು" ಎಂದು ಭಾವಿಸಿದನು.

ಅಷ್ಟರಲ್ಲಿ ಇವನ ಬಳಿಗೆ ಯಾವನೋ ಒಬ್ಬ ಅಪರಿಚಿತನು ಬಂದನು. ಎಷ್ಟೆಂದರೂ ಶ್ರೀದತ್ತನ ಮನಸ್ಸಿನಿಂದ ಸಂಪೂರ್ಣ ವಿಷಯ ಚಾಪಲ್ಯವಿನ್ನೂ ಅಳಿದಿರಲಿಲ್ಲ. ಆಗಂತುಕನನ್ನು ಕಂಡೊಡನೆ ತನ್ನ ಭವಣೆಯನ್ನು ಆತನಲ್ಲಿ ತೋಡಿಕೊಳ್ಳತೊಡಗಿದನು. ಸ್ವಪ್ರಯೋಜನವನ್ನೇ ಪ್ರಧಾನವಾಗಿಟ್ಟುಕೊಂಡು ಬಂದಿದ್ದ ಆ ಆಗಂತುಕನು ಅಂತರಂಗವನ್ನು ಮುಚ್ಚಿ ಶ್ರೀದತ್ತನ ವೃತ್ತಾಂತವನ್ನು ಕೇಳಿಕೊಂಡನು. ಬಳಿಕ ಏನೋ ಎಂದು ನೆಪವನ್ನೊಡ್ಡಿ ಶ್ರೀದತ್ತನನ್ನು ವಿಜಯಾರ್ಧಪರ್ವತಕ್ಕೆ ಕರೆದೊಯ್ದನು ಆ ಮೇಲೆ ತನ್ನ ಅಂತರಂಗವನ್ನು ಬಿಚ್ಚಿ "ಸೆಟ್ಟಿಯೇ ! ಈ ವಿಜಯಾರ್ಧಪರ್ವತದ ದಕ್ಷಿಣಕ್ಕೆ ಗಾಂಧಾರವೆಂಬ ದೇಶವಿದೆ. ನಿತ್ಯಾಲೋಕವೆಂಬುದು ಇದಕ್ಕೆ ಪ್ರಧಾನ ನಗರ. ಇಲ್ಲಿ ಗರುಡ ವೇಗನೆಂಬ ರಾಜನು ಆಳುತ್ತಿರುವನು. ಆತನಿಗೆ ಧಾರಿಣೀ ಎಂಬವಳು ಪಟ್ಟಮಹಷಿಯಾಗಿರುವಳು. ಈ ದಂಪತಿಗಳಿಗೆ ಗಂಧರ್ವದತ್ತೆಯೆಂಬ ಪುತ್ರಿಯೊಬ್ಬಳಿರುವಳು. ಇವಳು ಜನಿಸಿದಂದು ಜನ್ಮಲಗ್ನದ ಫಲವನ್ನೆಣಿಸಿದ ಜೋಯಿಸರು ಈಕೆಯು ಮುಂದೆ ರಾಜಪುರೀ ಪಟ್ಟಣದಲ್ಲಿ ವೀಣಾ ವಿಜಯಿಯೋರ್ವನನ್ನು ವರಿಸುವಳೆಂದು ಭವಿಷ್ಯ ನುಡಿದಿದ್ದರು. ಜೋಯಿಸರ ಮಾತಿನಲ್ಲಿ ವಿಶ್ವಾಸವಿಟ್ಟಿದ್ದ ಗರುಡವೇಗನು ಪ್ರಾಯಕ್ಕೆ ಬಂದ ಮಗಳ ಮದುವೆಯ ವಿಷಯವಾಗಿ ಪತ್ನಿಯೊಡನೆ ಪ್ರಸ್ತಾಪಿಸಿ ಬಳಿಕ ನನ್ನನ್ನು ಕರೆದು "ರಾಜಪುರೀ ಪಟ್ಟಣದ ಶ್ರೀದತ್ತ ಶ್ರೇಷ್ಠಿಯೊಡನೆ ನಮಗೆ ವಂಶಪರಂಪರೆಯಿಂದಲೂ ಸ್ನೇಹವಿದೆ. ನೀನು ಕೂಡಲೆ ಹೋಗಿ ಆತನನ್ನು ಇಲ್ಲಿಗೆ ಕರೆದು ತರಬೇಕು" ಎಂದು ಆಜ್ಞಾಪಿಸಿದನು. ಭೃತ್ಯನಾದ ನಾನು ಒಡನೆ ಬಂದು ಹಡಗು ನಷ್ಟವಾದ ಹಾಗೆ ನಿನಗೆ ಭ್ರಾಂತಿಯನ್ನುಂಟು ಮಾಡಿ ವರಾನ್ವೇಷಣೆಗಾಗಿ ಉಪಾಯದಿಂದ ನಿನ್ನನ್ನಿಲ್ಲಿಗೆ ಕರೆದು ತಂದಿರುವೆನು" ಎಂದು ವಿವರಿಸಿದನು. ಸೆಟ್ಟಿಯು ಅವನ ಮಾತಿನಿಂದ ಅತ್ಯಂತ ಹರ್ಷಿತನಾದನು. ತಡಮಾಡದೆ ಗರುಡವೇಗನನ್ನೂ

ಕಂಡನು. ಗರುಡವೇಗನು ಗೆಳೆಯನನ್ನುಪಚರಿಸಿ ಆಶಯವನ್ನರುಹಿ ಮಗಳಾದ ಗಂಧರ್ವದತ್ತೆಯನ್ನು ಆತನ ವಶಕ್ಕೊಪ್ಪಿಸಿದನು. ಶ್ರೀದತ್ತನು ಗಂಧರ್ವದತ್ತೆಯೊಡನೆ ಶೀಘ್ರವಾಗಿ ಸ್ವದೇಶಕ್ಕೆ ಮರಳಿದನು. ಎಲ್ಲಾ ವಿವರಗಳನ್ನು ತನ್ನ ಹೆಂಡತಿಗೂ ವಿವರಿಸಿದನು

ಬಳಿಕ ಪ್ರಾಯಭರಿತೆಯಾದ ತನ್ನ ಮಗಳು ವೀಣಾವಿದ್ಯೆಯಿಂದ ಜಯಿಸುವ ವರನನ್ನು ವರಿಸಲಿಕ್ಕಿರುವಳೆಂದು ಅರಸನಿಗೆ ತಿಳುಹಿ ಅವನ ಸಮ್ಮತಿಯಿಂದ ದೇಶದಲ್ಲೆಲ್ಲಾ ಡಂಗುರ ಹೊಡೆಯಿಸಿದನು. ಕನ್ಯಾರ್ಥಿಗಳಾದ ರಾಜಕುಮಾರರೆಲ್ಲರೂ ವೀಣಾಪರೀಕ್ಷಾಸ್ಥಾನವಾದ ಸ್ವಯಂವರ ಮಂಟಪಕ್ಕೆ ಬಂದು ಸೇರಿದರು. ಆದರೆ ವೀಣಾವಾದನದಲ್ಲಿ ಎಲ್ಲರೂ ಗಂಧರ್ವದತ್ತೆಯಿಂದ ಸೋಲಿಸಲ್ಪಟ್ಟರು. "ಅಪುಷ್ಕಲಾ ಹಿ ವಿದ್ಯಾಸ್ಯಾದವಜ್ಞೈಕ ಫಲಾಕ್ವಚಿತ್" ಅಸಂಪೂರ್ಣ ವಿದ್ಯೆಗೆ ಅವಜ್ಞೆಯೇ ಫಲವಲ್ಲವೇ! ಕೊನೆಗೆ ಈ ಸಮಾಚಾರವು ಜೀವಂಧರನ ಕಿವಿಗೂ ತಲಪಿತು. ಒಡನೆ ಸ್ವಯಂವರ ಮಂಟಪಕ್ಕೂ ಬಂದನು. ಪಣವಾಗಿಟ್ಟ ವೀಣೆಯನ್ನೆತ್ತಿ ಅತ್ಯಪೂರ್ವ ರೀತಿಯಲ್ಲಿ ಬಾರಿಸಿ ಗಂಧರ್ವದತ್ತೆಯನ್ನು ಸೋಲಿಸಿದನು. ಆಕೆಯು ತನಗಾದ ಅಪಜಯವನ್ನು ಜಯಕ್ಕಿಂತಲೂ ಮಿಗಿಲಾಗಿ ತಿಳಿದು ಜೀವಂಧರನನ್ನು ವರಿಸಿದಳು. ಪರಾಜಿತರೊಳಗೆ ಮಹಾರ್ಖ ಕಾಷ್ಠಾಂಗಾರನೂ ಒಬ್ಬನಾಗಿದ್ದನು. ವೀಣಾವಾದನದಲ್ಲಿ ಸೋತ ಅಪಮಾನವೊಂದು. ಗಂಧರ್ವದತ್ತೆಯಂತಹ ಸ್ತ್ರೀರತ್ನವು ಕೈತಪ್ಪಿ ಹೋದ ಹಾನಿಯಿನ್ನೊಂದು. ಇವುಗಳು ಆತನಲ್ಲಿ ಅಸಹನೀಯವಾದ ವೇದನೆಯನ್ನುಂಟು ಮಾಡಿದುವು.

ಜೀವಂಧರನ ಮೇಲೆ ಎಲ್ಲಿಲ್ಲದ ದ್ವೇಷಭಾವನೆಯು ಮೊಳೆಯಿತು. ಮತ್ಸರವು ಮಾತಾಗಿ ಹೊರಸೂಸಿತು. "ಈ ಬೇಹಾರಿಯ ಪುತ್ರನು ಯಾವ ಯೋಗ್ಯತೆಯುಳ್ಳವನು? ವಿಕ್ರಯೋಚಿತವಾದ ವಸ್ತುಗಳನ್ನು ಕೊಟ್ಟು ಕೊಳ್ಳುವ ತನ್ನ ಕೆಲಸವನ್ನು ಬಿಟ್ಟು ಕ್ರಯವಿಕ್ರಯಕ್ಕೆ ಒಳಪಡದ ಈ ಸ್ತ್ರೀರತ್ನವನ್ನೂ ಕೊಳ್ಳುವುದೆಂದರೇನು? ಶ್ರೇಷ್ಠ ವಸ್ತುಗಳು ನಮ್ಮಂತಹ ರಾಜರಿಗೇ ಸಲ್ಲತಕ್ಕವುಗಳು. ಹೀಗಿರುತ್ತ ನಮ್ಮ ಮುಂದೆ ಈಕೆಯನ್ನು ಈ ಅಲ್ಪನು ಪಡೆಯುವುದೆಂದರೆ ನಾವಿದ್ದು ಫಲವೇನು? ಇವಕ್ಕಿಂತ ಮಿಗಿ

ಶಾದ ಅಪಮಾನವು ನಮಗೆ ಬೇರೆ ಉಂಟೇ ?" ಎಂದು ಮುಂತಾಗಿ ಅಲ್ಲಿ ನೆರೆದ ರಾಜಪುತ್ರರು ಕೆರಳುವಂತೆ ಗಳಹಿದನು. ಅವಜ್ಞೆಯಿಂದ ಕಲಕಿದ ಹೃದಯವುಳ್ಳ ರಾಜಪುತ್ರರ ಮನಸ್ಸಿಗೆ ಈತನ ಮಾತು ಚೆನ್ನಾಗಿ ನಾಟಿತು. ಒಟ್ಟಾಗಿ ಜೀವಂಧರನೊಡನೆ ಕಾಳಗಕ್ಕೆ ನಿಂತರು. ಜೀವಂಧರನು ಧನುರ್ಧಾರಿಗಳಲ್ಲಿ ಅಗ್ರಗಣ್ಯನು. ಸಾವಿರ ಕಾಗೆಗಳಿಗೆ ಕಲ್ಲು ಒಂದು ಎಂಬಂತೆ ಅವನೊಬ್ಬನಿಂದಲೇ ಇವರೆಲ್ಲರೂ ಅಪಜಯವನ್ನು ಹೊಂದಿ ಪಲಾಯನ ಮಾಡಿದರು. ಆ ಮೇಲೆ ಜೀವಂಧರ ಗಂಧರ್ವದತ್ತೆಯರ ವಿವಾಹವು ವಿಧ್ಯುಕ್ತವಾಗಿ ವೈಭವದಿಂದ ಜರಗಿತು.

+++++++ +++++++

## ಗುಣಮಾಲಾ ಪರಿಣಯ

ಗಂಧರ್ವದತ್ತೆಯನ್ನು ವರಿಸಿ ಸಂಸಾರಸುಖ ಮಗ್ನನಾದ ಜೀವಂಧರನು ಒಂದು ದಿನ ನಗರವಾಸಿಗಳ ಪ್ರಾರ್ಥನೆಯನ್ನು ಮನ್ನಿಸಿ ಮಧುಮಾಸದ ಜಲಕ್ರೀಡಾದರ್ಶನೋತ್ಸುಕನಾಗಿ ಸ್ನೇಹಿತರೊಡನೆ ನದೀತೀರಕ್ಕೆ ಬಂದಿದ್ದನು. ಆಗ ಅಲ್ಲಿ ದೇವತಾರ್ಥವಾಗಿಟ್ಟಿದ್ದ ಹವಿಸ್ಸನ್ನು ಮುಟ್ಟಿತೆಂದು ಬ್ರಾಹ್ಮಣರು ಹೊಡೆದು ಕೆಡವಿದ ನಾಯಿಯೊಂದನ್ನು ಕಂಡನು. ಅದರ ನರಳಾಟಕ್ಕೆ ಇವನ ಮನ ಕರಗಿತು. ಕರುಣೆಯಾಗಿ ಹರಿಯಿತು. ಅದನ್ನು ಉಪಚರಿಸಿ ಬದುಕಿಸಲು ಯತ್ನಿಸಿದನು. ಆಗಲಿಲ್ಲ. ಕೊನೆಗೆ ಅದಕ್ಕೆ ಪರಲೋಕವು ಸಿದ್ಧಿಸಲೆಂದು ಮರಣಕಾಲದಲ್ಲಿ ಪಂಚಪರಮೇಷ್ಠಿಗಳ ಮಂತ್ರಗಳನ್ನು ಉಪದೇಶಿಸಿದನು. ಅವುಗಳ ಪ್ರಭಾವದಿಂದ ಆ ನಾಯಿಯು ಯಕ್ಷರಾಜನಾಗಿ ಪುನರ್ಜನ್ಮವನ್ನು ಪಡೆಯಿತು. ಪೂರ್ವೋಪಕಾರ ಸ್ಮರಣೆಯುಳ್ಳ ಯಕ್ಷರಾಜನು ಜೀವಂಧರನನ್ನು ಬಹಳವಾಗಿ ಸ್ತುತಿಸಿ "ಅವಶ್ಯ ಬಿದ್ದಾಗ ನನ್ನನ್ನು ಸ್ಮರಿಸು" ಎಂದು ನುಡಿದು ಹೊರಟು ಹೋದನು.

ಜೀವಂಧರನು ಯಕ್ಷರಾಜನನ್ನು ಬೀಳ್ಕೊಟ್ಟು ಜಲಕ್ರೀಡೆಯನ್ನೀಕ್ಷಿಸುತ್ತಿದ್ದನು. ಆಗ ಜಲಕ್ರೀಡೆಗಾಗಿ ಅಲ್ಲಿಗೆ ಬಂದಿದ್ದ ಗುಣಮಾಲೆಗೂ

ಆಕೆಯು ಗೆಳತಿಯಾದ ಸುರಮಂಜರಿಗೂ ತಂತಮ್ಮ ಗಂಧದ ಪುಡಿಯ ಉತ್ಕೃಷ್ಟತೆಯ ಕುರಿತು ಮೇಲಾಟವು ನಡೆದಿತ್ತು. ಅವರೊಳಗೆ ಈ ವಾದವು ಬಗೆಹರಿಯದೆ ಕೊನೆಗೆ " ಇದನ್ನು ಗುಣೈಕ ಪಕ್ಷಪಾತಿಯೊಬ್ಬನ ನಿರ್ಣಯಕ್ಕೆ ಬಿಡುವ ಅವನ ನಿರ್ಣಯದಿಂದ ಯಾವಳ ಪುಡಿಯು ನಿಕೃಷ್ಟವೆಂದು ಸಿದ್ಧವಾಗುವುದೋ ಅವಳು ತನ್ನ ಸೋಲನ್ನೊಪ್ಪಿ ಈ ನದಿಯಲ್ಲಿ ಸ್ನಾನ ಮಾಡದೆ ಹೊರಟು ಹೋಗಬೇಕು." ಎಂದು ತಮ್ಮೊಳಗೆ ಒಪ್ಪಂದ ಮಾಡಿಕೊಂಡರು. ಪರಿಚಾರಿಕೆಯರ ಮೂಲಕ ತಂತಮ್ಮ ಗಂಧದ ಪುಡಿಗಳನ್ನು ಪರೀಕ್ಷಾರ್ಥವಾಗಿ ಜೀವಂಧರನಿಗೆ ಕಳುಹಿಕೊಟ್ಟರು. ಇವನು ಅವರಿಬ್ಬರ ಪುಡಿಗಳನ್ನು ಚೆನ್ನಾಗಿ ಪರೀಕ್ಷಿಸಿ ಗುಣಮಾಲೆಯ ಪುಡಿಯೇ ಉತ್ಕೃಷ್ಟವೆಂದು ನಿರ್ಣಯವಿತ್ತನು. ಇದು ಸುರಮಂಜರಿಯ ಪರಿಚಾರಿಕೆಗೆ ಹಿತವಾಗಲಿಲ್ಲ. " ತಮ್ಮ ನಿರ್ಣಯಕ್ಕೆ ಆಧಾರ ಬೇಕು. " ಎಂದು ಆಕ್ಷೇಪವೆತ್ತಿದಳು. ಜೀವಂಧರನು ವಿವಾದ ಸಮಾಧಾನಕ್ಕಾಗಿ " ತುಂಬಿಗಳು ಮುತ್ತುವ ಪುಡಿಯೇ ಉತ್ಕೃಷ್ಟ "ವೆಂದು ನುಡಿದು. ಪ್ರತ್ಯಕ್ಷ ಪ್ರಮಾಣದಿಂದ ಅದನ್ನು ತೋರಿಸಿಕೊಟ್ಟನು. ಸುರಮಂಜರಿಯ ಪರಿಚಾರಿಕೆಗೆ ಸಮಾಧಾನವಾಯಿತು. ಆದರೂ ನಿಕೃಷ್ಟತೆಗೆ ಕಾರಣವನ್ನು ಕೇಳಿದಳು. "ಅಕಾಲದ ವಸ್ತುಗಳಿಂದ ತಯಾರಿಸಿದುದೇ ಇದರ ನಿಕೃಷ್ಟತೆಗೆ ಕಾರಣವಾಯಿತು." ಎಂದು ಜೀವಂಧರನು ಉತ್ತರಿಸಿದನು.

ಬಳಿಕ ಉಭಯರ ಪರಿಚಾರಿಕೆಯರೂ ಜೀವಂಧರನಿಗೆ ನಮಿಸಿ, ಆತನನ್ನು ಸ್ತುತಿಸಿ ಹಿಂದೆರಳಿದರು. ನಿರ್ಣಯವನ್ನು ತಂತಮ್ಮ ಒಡತಿಯರಿಗೆ ನಿವೇದಿಸಿಕೊಂಡರು. ಜೀವಂಧರನು ನುಡಿದ ನಿರ್ಣಯವು ನ್ಯಾಯಸಮ್ಮತವಾಗಿದ್ದರೂ ತನಗನುಕೂಲವಾಗಿಲ್ಲದುದರಿಂದ ಸುರಮಂಜರಿಯು ದ್ವೇಷಭಾವನೆಯನ್ನು ತಾಳಿದಳು. ನಹ್ಯತ್ರರೋಚತೇ ನ್ಯಾಯ್ಯಮೀರ್ಷ್ಯಾದೂಷಿತ-ಚೇತಸೇ " ಪರೋತ್ಕರ್ಷವನ್ನು ಸಹಿಸದ ಜನರ ಮನಸ್ಸಿಗೆ ನ್ಯಾಯಯುಕ್ತವಾದ ಮಾತಾದರೂ ರುಚಿಸದು. ಆದುದರಿಂದ ಯಾರು ಎಷ್ಟು ಸಮಾಧಾನ ಹೇಳಿದರೂ ಕೇಳದೆ ಸುರಮಂಜರಿಯು ಸಿಟ್ಟಿನಿಂದ ಮನೆಗೆ ಹಿಂತೆರಳಿದಳು. ಜೀವಂಧರನನ್ನು ಬಿಟ್ಟು ಇತರ ಪುರುಷರಾರನ್ನೂ ನಾನು ನೋಡೆನೆಂದು

ಪ್ರತಿಜ್ಞೆತೊಟ್ಟು ಅಂತಃಪುರವನ್ನು ಸೇರಿದಳು. ಪ್ರಿಯ ಸಖಿಯ ಈ ಪ್ರೀತಿ ಭಂಗವು ಗುಣಮಾಲೆಯ ದುಃಖಕ್ಕೆ ಕಾರಣವಾಯಿತು.

ಸಖಿಯ ಕೋಪಕ್ಕೆ ಕಾರಣವಾದ ಈ ಘಟನೆಯನ್ನು ನೆನೆನೆನೆದು ಚಿಂತಿಸುತ್ತಿರುವಲ್ಲಿ ಇನ್ನೊಂದು ಆಪತ್ತು ಬಂದೊದಗಿತು. ಅರಮನೆಯ ಸೊಕ್ಕಿದ ಪಟ್ಟದಾನೆಯೊಂದು ಕಟ್ಟಿದ್ದ ಸಂಕಲೆಯನ್ನು ಕಡಿದು ಪಟ್ಟಣಿಗರ ನ್ನೆಲ್ಲ ಓಡಿಸುತ್ತ ಆ ಯೆಡೆಗೆ ಬಂತು. ಇದನ್ನು ಕಂಡು ಬೆದರಿದ ಗುಣಮಾಲೆಯ ಪರಿಜನರು ಒಡತಿಯನ್ನಲ್ಲೇ ಬಿಟ್ಟು ಜೀವದಾಸೆಯಿಂದ ಸಿಕ್ಕಿದ ಕಡೆಗೆ ಓಡಿದರು. ಅಪಾಯ ಬಂದಾಗ ನೆಂಟರೂ ಇಲ್ಲ; ಇಷ್ಟರೂ ಇಲ್ಲ. " ನಹಿ ಸಂತೀಹ ಜಂತೂನಾಮಪಾಯೇ ಸತಿ ಬಾಂಧವಾಃ " ಎಂದಲ್ಲವೆ ಹಿರಿಯರ ಮಾತು. ಆದರೆ ಗುಣಮಾಲೆಯನ್ನು ಹೊಟ್ಟೆಯ ಮಗುವಿನಂತೆ ಸಲಹಿದ ದಾದಿಯೊಬ್ಬಳು ಈಕೆಯನ್ನು ಈ ಅಪಾಯದಲ್ಲಿ ಬಿಟ್ಟು ಹೋಗಲು ಮನಸ್ಸು ಬಾರದೆ " ಈ ಆನೆಗೆ ಮೊದಲಿಗೆ ನಾನೇ ತುತ್ತಾ ಗುವೆನು. ಬಳಿಕ ಈಕೆಯನ್ನು ಕೊಲ್ಲಲಿ. ನಾನು ಜೀವಂತಳಿದ್ದು ಈಕೆಗೊದಗುವ ವಿಪತ್ತನ್ನು ನೋಡಲಾರೆನು " ಎಂದುಕೊಂಡು ನುಗ್ಗಿ ಬರುತ್ತಿ ರುವ ಆನೆಗಿದಿರಾಗಿ ತಾನು ಧೈರ್ಯದಿಂದ ನಿಂತುಕೊಂಡಳು. ಇವೆಲ್ಲವನ್ನೂ ನಿಂತು ನೋಡುತ್ತಿದ್ದ ಪರಹಿತತತ್ಪರನಾದ ಜೀವಂಧರನು ತಟ್ಟನೆ ಮುಂದಕ್ಕೆ ನೆಗೆದನು. ತನ್ನ ಜೀವದಾಸೆಯನ್ನು ತೊರೆದು ಆನೆಯೊಡನೆ ಹೋರಾಡಿ ಅದನ್ನು ಪರಾಜಯಗೊಳಿಸಿದನು. ಅಬಲೆಯರಿಗೊದಗಿದ ಆಪತ್ತು ದೂರ ವಾಯಿತು " ಕ್ವಚಿತ್ಕಿಮಪಿ ಸೌಜನ್ಯಂ ನೋಚೇಲ್ಲೋಕಃ ಕುತೋಭವೇತ್" ಇಂತಹ ಸತ್ಪುರುಷರಿಂದಲೇ ಲೋಕವು ಅಪಾಯವಿಲ್ಲದೆ ಬದುಕುತ್ತಿದೆ.

ಆನೆಯು ಸೋತು ಓಡಿತು. ಓಡಿದ ಪರಿಜನರು ಮತ್ತೆ ಗುಣ ಮಾಲೆಯ ಬಳಿ ಸೇರಿದರು. ಈ ವಿಪತ್ಪರಿಹಾರಾವಸರದಲ್ಲಿ ಜೀವಂಧರನಿಗೂ ಗುಣಮಾಲೆಗೂ ಪರಸ್ಪರ ದರ್ಶನವಾಯಿತು. ಇದರಿಂದ ಇಬ್ಬರಲ್ಲೂ ಕಾಮ ವಿಕಾರವು ಕಾಣಿಸಿಕೊಂಡಿತು. ಗುಣಮಾಲೆಯು ಇನ್ನು ಮನೆಗೆ ಮರಳ ಬೇಕು. ಮನಸ್ಸು ಕೇಳಲಿಲ್ಲ. ಮುಂದೆ ಹೆಜ್ಜೆಯಿಡಬೇಕು. ಕಾಲು

ಬರಲಿಲ್ಲ. ಕೊನೆಗೆ ಮನಸ್ಸನ್ನು ಜೀವಂಧರನಿಗೊಪ್ಪಿಸಿ ಅಗಲಲಾರದೆ ಅಗಲಿದಳು. ಆದರೆ ಕಾಮನು ಆ ಕೋಮಲಾಂಗಿಯನ್ನು ಕಾಡತೊಡಗಿದನು. ಆಕೆ ಸಹಿಸದಾದಳು. ವಿಪತ್ಪರಿಹಾರಕನಾದ ಜೀವಂಧರನ ಬಳಿಗೆ ದೂತಿಗೆ ಪ್ರತಿಯಾಗಿ ಗಿಣಿಯೊಂದನ್ನು ಕಳುಹಿದಳು. ಅದು ಜೀವಂಧರನ ಬಳಿಗೈದಿ ತನ್ನ ಒಡತಿಯ ಅಭಿಮತವನ್ನು ಸೂಚಿಸುವಂತೆ:—

ವಿಷಯೇಷು ಸಮಸ್ತೇಷು ಕಾಮಂ ಸಫಲಯನ್ಸದಾ |
ಗುಣಮಾಲಾಂ ಜಗನ್ಮಾನ್ಯಾಂ ಜೀವಯನ್ ಜೀವಿತಾಚ್ಚಿರಂ ||

[ ನೀನು ಯಾವಾಗಲೂ ಸಮಸ್ತ ಭೋಗೋಪಭೋಗ ಪದಾರ್ಥಗಳಲ್ಲಿ ಕಾಮವನ್ನು ಸಫಲಗೊಳಿಸುವವನಾಗಿಯೂ ಲೋಕಪೂಜ್ಯಳಾದ ಗುಣಮಾಲೆಯನ್ನು ಬದುಕಿಸುವವನಾಗಿಯೂ ಬಹುಕಾಲ ಬಾಳು. ]

ಈ ಆಶೀರ್ವಚನರೂಪವಾದ ಶ್ಲೋಕವೊಂದನ್ನು ನುಡಿದು ಅತ್ಯಂತ ಚಾತುರ್ಯದಿಂದ ಗುಣಮಾಲೆಯ ಅಭಿಪ್ರಾಯವನ್ನು ತಿಳಿಸಿತು. ಗುಣಮಾಲೆಯು ಗಿಣಿಯ ಮೂಲಕ ತನಗೆ ಕಳುಹಿಸಿದ ಈ ಅರ್ಥಗರ್ಭಿತವಾದ ಸಂದೇಶವನ್ನರಿತ ಜೀವಂಧರನು ಅತ್ಯಂತ ಹರ್ಷಿತನಾದನು. ಆಕೆಯ ಸಂದೇಶಕ್ಕೆ ಸಮ್ಮತಿಗೊಟ್ಟು ಅದೇ ಗಿಣಿಯ ಮೂಲಕ ಪ್ರತ್ಯುತ್ತರವನ್ನು ಕಳುಹಿದನು. ಪತ್ರದಿಂದೊಡಗೂಡಿದ ಬಂದ ಗಿಣಿಯನ್ನು ಕಂಡು ಗುಣಮಾಲೆಗೆ ಸಂತೋಷವು ಹಿಡಿಸದಾಯಿತು. "ಸ್ವಸ್ಯೈವ ಸಫಲೋ ಯತ್ನಃ ಪ್ರೀತಯೇ ಹಿ ವಿಶೇಷತ:" ಸ್ವಪ್ರಯತ್ನದಿಂದಲೇ ಕಾರ್ಯ ಸಿದ್ಧಿಯಾದರೆ ಪ್ರತಿಯೊಬ್ಬರಿಗೂ ವಿಶೇಷ ಹರ್ಷವಾಗುವುದು ಸಹಜವೆ. ಇವರೊಳಗಿನ ಪರಸ್ಪರಾನುರಾಗವನ್ನು ಗುಣಮಾಲೆಯ ತಾಯಿ ವಿನಯಮಾಲೆಯೂ ತಂದೆ ಕುಬೇರ ಮಿತ್ರನೂ ತಿಳಿದರು. ಪದ್ಧತಿಯಂತೆ ಕುಲವೃದ್ಧರಿಬ್ಬರನ್ನು ಗಂಧೋತ್ಕಟ ಶ್ರೇಷ್ಠಿಯ ಸಮೀಪಕ್ಕೆ ಅಟ್ಟಿದರು. ಶ್ರೇಷ್ಠಿಯು ಅವರ ಪ್ರಾರ್ಥನೆಗೆ ಸಮ್ಮತಿಗೊಟ್ಟನು. ಜೀವಂಧರ ಗುಣಮಾಲೆಯರ ಪರಿಣಯವು ವೈಭವದಿಂದ ಜರಗಿತು.

+++++++++

## ಪದ್ಮಾದೇವಿಯ ಪಾಣಿಗ್ರಹಣ

ಪ್ರಯತ್ನಸಾಧ್ಯಳಾದ ಗುಣಮಾಲೆಯನ್ನು ಸ್ವಸಾಹಸದಿಂದಲೇ ಸಾಧಿಸಿದೆನೆಂದು ಜೀವಂಧರನು ಅತ್ಯಂತ ಸಂತುಷ್ಟಿಯಿಂದಿದ್ದನು. ಆದರೆ ಇವನಿಂದ ಪರಾಜಿತವಾಗಿ ಪಲಾಯನಗೈದ ಪಟ್ಟದಾನೆಯು ತನಗುಂಟಾದ ಪರಾಭವದಿಂದ ವಿಶೇಷ ದುಃಖಕ್ಕೊಳಗಾಯಿತು. ಆಹಾರವನ್ನು ತ್ಯಜಿಸಿತು. ಕಾಷ್ಠಾಂಗಾರನು ಗಜರಾಜನ ದುಃಖಹೇತುವನ್ನು ವಿಚಾರಿಸಿದನು. ಜೀವಂಧರನೇ ಕಾರಣನೆಂದು ತಿಳಿದು ಬಂತು. ಈ ಮೊದಲೇ ಬೇಡರ ಕಾಳಗದಲ್ಲಿ, ಗಂಧರ್ವದತ್ತೆಯ ಸ್ವಯಂವರದಲ್ಲಿ ಜೀವಂಧರನು ವಿಜಯಿಯಾದನೆಂದು ಅವನ ವಿಷಯವಾಗಿ ಕ್ರೋಧಾಸೂಯೆಗಳನ್ನು ತಾಳಿದ್ದನು. ಇದರಿಂದ ಅವು ಇಮ್ಮಡಿಸಿದುವು.

" ಗುಣಾಧಿಕ್ಯಂಚ ನೀಚನಾಮಾಧೇರೇವ ಹಿ ಕಾರಣಂ " ಜೀವಂಧರನ ಪರಾಕ್ರಮಾದಿ ಗುಣಗಳೇ ನೀಚನಾದ ಕಾಷ್ಠಾಂಗಾರನ ದೃಷ್ಟಿಗೆ ಅಪರಾಧಗಳಾಗಿ ತೋರಿದುವು. ಒಡನೆ ಜೀವಂಧರನನ್ನು ಕೈಸೆರೆಹಿಡಿದು ತರುವಂತೆ ಸೈನ್ಯಕ್ಕಾದೇಶವಿತ್ತನು. ಅರಸಾಜ್ಞೆಯಂತೆ ಸೈನ್ಯವು ಗಂಧೋತ್ಕಟ ಶ್ರೇಷ್ಠಿಯ ಮನೆಗೆ ಮುತ್ತಿಗೆ ಹಾಕಿತು. " ಮೃಗಾಃ ಕಿನ್ನಾಮ ಕುರ್ವಂತಿ ಮೃಗೇಂದ್ರಂ ಪರಿತಸ್ಥಿತಾಃ " ಜಿಂಕೆಗಳಾಕ್ರಮಿಸಿ ಸಿಂಹವನ್ನೇನು ಮಾಡಬಲ್ಲುವು ? ವೀರನಾದ ಜೀವಂಧರನು ಶತ್ರುಸೇನಾಸಂಹಾರಕ್ಕೆ ಸಿದ್ಧನಾದನು. ಆಗ ಗಂಧೋತ್ಕಟ ಶ್ರೇಷ್ಠಿಯು ಮಗನ ಈ ಯುದ್ಧಸನ್ನಾಹವನ್ನು ಸಾಮೋಪಾಯದಿಂದ ತಡೆದನು. ಜೀವಂಧರನು ಪಿತ್ರಾಜ್ಞಾ ಪಾಲನೆಗಾಗಿ ಯುದ್ಧೋದ್ಯಮವನ್ನು ಬಿಟ್ಟುಕೊಟ್ಟನು. ಬಳಿಕ ಶ್ರೇಷ್ಠಿಯು ಮಗನನ್ನು ಕರೆದುಕೊಂಡು ರಾಜಾಸ್ಥಾನಕ್ಕೆ ಬಂದನು. ತಂದೆಯ ಮಾತಿಗೆ ಬಾಗಿ ವಿನೀತನಾಗಿ ಜೀವಂಧರನು ಬಂದಿದ್ದರೆ ಕಾಷ್ಠಾಂಗಾರನು ತನಗಿವನು ಅಂಜಿ ಬಂದನೆಂದು ಗರ್ವಿಸಿ, ಇವನಿಗೆ ಮರಣದಂಡನೆಯನ್ನು ವಿಧಿಸಿದನು. ಆಗಲೇ ಜೀವಂಧರನು ಕಾಷ್ಠಾಂಗಾರನನ್ನು ಸಂಹರಿಸುತ್ತಿದ್ದನು. ಆದರೆ ಗುರುವಚನವಲಂಘನೀಯವೆಂದು ಪ್ರಾಣಾಪಾಯವೊದಗಿದರೂ ಸುಮ್ಮನಿದ್ದನು. ಕಟುಕರು ಈತನನ್ನು ವಧ್ಯಸ್ಥಾನಕ್ಕೆ ಕೊಂಡೊಯ್ದರು. ಶ್ರೇಷ್ಠಿಯು ರಾಜಾಜ್ಞೆಗಿದಿರಾಡಲಾರದೆ ಪುತ್ರನಳಿವಿಗೆ ಅಳುತ್ತಾ ಅಗಲಿದನು.

ಜನರೆಲ್ಲರೂ ಮರುಗಿದರು. " ಈ ಕಾಷ್ಠಾಂಗಾರನ, ನೀಚನ ವಂಚನೆಯು ಲೋಕವನ್ನತಿಕ್ರಮಿಸಿತು. ತನ್ನನ್ನು ಪ್ರೀತಿಯಿಂದ ಸಲಹಿದ ಸ್ವಾಮಿಯಾದ ಸತ್ಯಂಧರನನ್ನು ನಿರ್ದಯೆಯಿಂದ ಕೊಂದನು. ಈಗಲಾತನ ಕುಲವನ್ನೇ ನಿರ್ಮೂಲಗೈಯ್ಯುತ್ತಿರುವನಲ್ಲಾ ಸರ್ವಸಮದರ್ಶಿಯಾದ ಮೃತ್ಯುವೂ ಈ ಕೆಟ್ಟ ದೊರೆಯಂತೆ ಜೀವಂಧರನನ್ನು ವಂಚಿಸಿಬಿಟ್ಟಿತೇ ! ಈ ಪಾಪಿ ಕಾಷ್ಠಾಂಗಾರನಿಗೇಕೆ ಮರಣವು ಬರಬಾರದು " ಎಂದು ತಮ್ಮೊಳಗೇ ಕಳವಳಗೊಂಡರು. ಜೀವಂಧರನ ಇಷ್ಟಮಿತ್ರರು ಗೆಳೆಯನಿಗೊದಗಿದ ಆಪತ್ತಿಗಾಗಿ ಪಶ್ಚಾತ್ತಾಪಪಟ್ಟರು. ಜೀವಂಧರು ನಿರಪಾಯನು. ಆತನಿಗೆ ಯಾರಿಂದಲೂ ಕೇಡೊದಗದು " ಎಂದು ಮುನಿಯ ಮಾತಿನಲ್ಲಿ ಈತನ ತಾಯ್ತಂದೆಗಳಿಗೆ ವಿಶ್ವಾಸ ತಪ್ಪಿತು.

ಇಂತಹ ಸ್ಥಿತಿಯಲ್ಲಾದರೂ ಜೀವಂಧರನು ಮಂದಧೀರನಾಗಿ ನಿಶ್ಚಿಂತೆ ಯಿಂದಿದ್ದನು. ಎಲ್ಲವೂ ಪೂರ್ವಾರ್ಜಿತ ಕರ್ಮಫಲವೆಂದು ಭಾವಿಸಿದನು. ಕಟುಕರು ಖಡ್ಗ ಹಿರಿದು ಶಿರಚ್ಛೇದನಕ್ಕೆ ಸಿದ್ಧರಾದರು. ಜೀವಂಧರನು ಆಗ ತನ್ನಿಂದ ಉಪಕೃತನಾಗಿ ಭಾಷೆಗೊಟ್ಟು ತೆರಳಿದ್ದ ಯಕ್ಷೇಂದ್ರನನ್ನು ನೆನೆದನು. ನೆನೆದುದೆ ತಡ ಸುದರ್ಶನದೇವನೆಂಬ ಆ ಯಕ್ಷರಾಜನು ಅಲ್ಲಿಗೆ ಧಾವಿಸಿ ಬಂದು ಕಟುಕರು ನೋಡುತ್ತಿದ್ದಂತೆ ಜೀವಂಧರನನ್ನೆತ್ತಿ ಚಂದ್ರೋದಯ ಪರ್ವತದ ತನ್ನ ನಿವಾಸಸ್ಥಾನಕ್ಕೆ ಕೊಂಡೊಯ್ದನು. ಅಲ್ಲಿ ಈತನಿಗೆ ಕ್ಷೀರಸಾಗರ ಜಲದಿಂದ ಅಭಿಷೇಕ ಮಾಡಿಸಿ " ನೀನು ನನ್ನನ್ನು ಪೂರ್ವಭವದಲ್ಲಿ ಪಂಚಪರಮೇಷ್ಠಿ ಮಂತ್ರೋಪದೇಶದಿಂದ ಪರಿಶುದ್ಧನನ್ನಾಗಿ ಮಾಡಿದಂತೆ ಇಂದೀ ಅಭಿಷೇಕದಿಂದ ನಿನ್ನನ್ನು ಪವಿತ್ರನೆಂಬಭಿಧಾನವುಳ್ಳವ ನನ್ನಾಗಿ ಮಾಡಿದೆನು. ನಿನಗೆ ಈಗ ಕಾಮರೂಪದಾಯಕ, ಗಾನಬೋಧಕ, ವಿಷಪರಿಹಾರಕಗಳೆಂಬ ಮೂರು ಮಂತ್ರಗಳನ್ನು ಉಪದೇಶಿಸುವೆನು. ಇವು ಗಳು ನಿನ್ನ ಅಭಿವೃದ್ಧಿಗೆ ಸಾಧನಗಳಾಗುವುವು. ನೀನು ಈಗಲೇ ಯುದ್ಧಕ್ಕೆ ದುಡುಕಬೇಡ. ಸಂವತ್ಸರಾವಧಿಯು ಕಳೆದ ಮೇಲೆ ಸಮಸ್ತ ರಾಜರನ್ನೂ ಪಾಲಿಸುವವನಾಗುವೆ. ಕೊನೆಗೆ ಮೋಕ್ಷವನ್ನೂ ಪಡೆಯುವೆ" ಎಂದು ಮಂತ್ರೋಪದೇಶದೊಡನೆ ಹಿತಬೋಧೆಯನ್ನು ಮಾಡಿ ಪ್ರತ್ಯುಪಕಾರದಿಂದ

ಧನ್ಯನಾಗಿ ಜೀವಂಧರನನ್ನು ಕಳುಹಿಕೊಟ್ಟನು. ಯಕ್ಷೇಂದ್ರನಿಂದ ಈ ರೀತಿ ಸತ್ಕೃತನಾಗಿ ಹೊರಟ ಜೀವಂಧರನಿಗೆ ದೇಶಸಂಚಾರ ಮಾಡಬೇಕೆಂಬ ಆಶೆಯುಂಟಾಯಿತು. ಈ ಕುರಿತು ಆ ಯಕ್ಷೇಂದ್ರನಿಂದ ತಿಳಿಯಬೇಕಾದ ವಿಷಯಗಳನ್ನು ತಿಳಿದುಕೊಂಡು ಏಕಾಕಿಯಾಗಿ ದೇಶಸಂಚಾರಕ್ಕೆ ಹೊರಟನು.

ಸಂಚಾರ ಮಾಡುತ್ತಿರುವ ಜೀವಂಧರನು ಒಮ್ಮೆ ಮಹಾರಣ್ಯ ಮಧ್ಯದ ದಾರಿಯಾಗಿ ಹೋಗುತ್ತಿರಲು, ಕಾಡ್ಗಿಚ್ಚಿನ ಆಕ್ರಮಣಕ್ಕೆ ಸಿಕ್ಕಿ ಸಂಕಟ ಕ್ಕೊಳಗಾದ ಆನೆಗಳ ಹಿಂಡೊಂದನ್ನು ಕಂಡನು. ಅದರ ಮೇಲೆ ಅತ್ಯಂತ ಮರುಕಗೊಂಡವನಾಗಿ ರಕ್ಷಣೋಪಾಯವನ್ನು ಚಿಂತಿಸುತ್ತಿರುವಷ್ಟರಲ್ಲೇ ಹಠಾತ್ತಾಗಿ ಆಕಾಶವು ಮೋಡಗಳಿಂದ ಮುಚ್ಚಿತು. ಪುಣ್ಯಶಾಲಿಗಳ ಇಚ್ಛೆಯು ಈಡೇರುವುದಕ್ಕೆ ವಿಳಂಬವಿದೆಯೇ! ಗುಡುಗು ಗುಡುಗಿತು, ಮಿಂಚು ಮಿಂಚಿತು, ಮಳೆಯು ಸುರಿಯಿತು. ಉರಿಯಡಗಿ ಆನೆಗಳಿಗೊದ ಗಿದ ಆಪತ್ತು ದೂರವಾಯಿತು. ಜೀವಂಧರನು ತನ್ನ ಒಂದು ಆಪತ್ತು ದೂರ ವಾದಂತೆ ಹರ್ಷಗೊಂಡನು.

ಜೀವಂಧರನು ಆನೆಗಳ ಆಪತ್ತನ್ನು ಪರಿಹರಿಸಿ ಈ ಅರಣ್ಯವನ್ನು ಬಿಟ್ಟು ಮುಂದಕ್ಕೆ ನಡೆದನು. ಮಾರ್ಗಕ್ರಮಣ ಮಾಡುತ್ತ ತೀರ್ಥಂಕರರು ಅಂಗೀ ಕರಿಸಿದ ಪುಣ್ಯಕ್ಷೇತ್ರಗಳನ್ನೆಲ್ಲಾ ಸಂದರ್ಶಿಸಿದನು. ಅಲ್ಲಿಯ ಧರ್ಮರಕ್ಷಕ ದೇವತೆಯಿಂದ ಸತ್ಕೃತನಾಗಿ ಮುಂದೆ ಶುಭಶಕುನಗಳೊಡನೆ "ಚಂದ್ರಾಭಾ" ಎಂಬ ರಾಜಧಾನಿಯನ್ನು ಸೇರಿಸಿದನು. ಆ ಸಮಯಕ್ಕೆ ಅಲ್ಲಿಯ ಅರಸನಾದ ಧನಪತಿ ಮಹಾರಾಜನಿಗೂ ರಾಣಿ ತಿಲೋತ್ತಮಾ ದೇವಿಗೂ ಮುದ್ದಿನ ಮಗಳೆನಿಸಿದ ಪದ್ಮಾದೇವಿಯೆಂಬ ಕನ್ನಿಕೆಯು ಸರ್ಪದ ಕಡಿತದಿಂದ ಮೂರ್ಛೆಗೊಂಡು ಬಿದ್ದಿದ್ದಳು. ರಾಜಧಾನಿಯೇ ಮರುಗುತ್ತಿತ್ತು. ಪರಹಿತೈಷಿ ಯಾದ ಜೀವಂಧರನು ಇದನ್ನರಿತು ಸುಮ್ಮನಿರಲಾರದೆ ಅರಮನೆಗೆ ಬಂದನು. ಸುದರ್ಶನ ದೇವದತ್ತವಾದ ವಿಷಪರಿಹಾರಕ ಮಂತ್ರಬಲದಿಂದ ಆಕೆಯನ್ನು ಬದುಕಿಸಿದನು. ಪದ್ಮಾದೇವಿಯ ಬಂಧುಗಳ ಸಂತೋಷಕ್ಕೆ ಮೇರೆಯಿಲ್ಲ. ಜೀವಂಧರನನ್ನು ಸ್ತುತಿಸಿ ದಣಿಯಲಿಲ್ಲ. ಪೂಜಿಸಿ ತೃಪ್ತ ರಾಗಲಿಲ್ಲ, ಪದ್ಮಾದೇವಿಯ ಅಣ್ಣನಾದ ಯುವರಾಜ ಲೋಕಪಾಲನು ಜೀವಂಧರನಲ್ಲಿ ಮಹಾಪುರುಷ ಲಕ್ಷಣಗಳನ್ನು ಕಂಡನು. ಜೀವದಾನವಿತ್ತ

ಈ ಮಹೋಪಕಾರಕ್ಕೆ ಪದ್ಮಾದೇವಿಯನ್ನೇ ಈತನಿಗೆ ಒಪ್ಪಿಸಿ ಬಿಡುವುದಕ್ಕಿಂತ ಅನ್ಯಪ್ರತ್ಯುಪಕಾರವಿಲ್ಲವೆಂದು ಬಗೆದನು. ಒಡನೆ ಅರ್ಧ ರಾಜ್ಯಸಮೇತ ವಾಗಿ ತಂಗಿಯನ್ನು ಜೀವಂಧರನಿಗೆ ಧಾರೆಯೆರೆದನು. ಜೀವಂಧರನು ಆಕೆಯ ಪಾಣಿಗ್ರಹಣ ಮಾಡಿದನು.

+++++++++++

## ಕ್ಷೇಮಶ್ರೀ ವಿವಾಹ

ಜೀವಂಧರನು ಯದೃಚ್ಛೆಯಿಂದ ತನಗೊದಗಿದ ರಾಜ್ಯಾರ್ಧ ಸಮೇತ ವಾದ ಸ್ತ್ರೀರತ್ನವನ್ನು ಪ್ರೀತಿಯಿಂದ ಸ್ವೀಕರಿಸಿದನು. ತನ್ನ ಹೃದಯ ಪೀಠದಲ್ಲಿ ಆ ಪದ್ಮಾದೇವಿಗೆ ಸ್ಥಾನವನ್ನೂ ಕೊಟ್ಟನು. ಆದರೆ ಸಿಕ್ಕಿದ ಸುಖಕ್ಕೆ ಅಂಟಿಕೊಂಡು ನಿಷ್ಕ್ರಿಯನಾಗುವ ದೌರ್ಬಲ್ಯವು ಜೀವಂಧರನಲ್ಲಿ ರಲಿಲ್ಲ. ಆತನು ಸಶಕ್ತನು. ಸಾಹಸಿಯು ಸುಖವೆಂಬುದು ಆತನಿಗೆ ಕೈಯೊಳಗಿನ ಗಂಟು! ಆದುದರಿಂದ ಚಿರಕಾಲ ಪದ್ಮಾದೇವಿಯೊಡನೆ ಸುಖಿಸುತ್ತ ಬಿದ್ದಿರಲು ಇಷ್ಟಪಡಲಿಲ್ಲ. ಮತ್ತೆ ತನ್ನ ಸಾಹಸಕ್ಕೆ ಚಾಲನೆ ಯನ್ನು ಕೊಟ್ಟನು. ಒಂದು ದಿನ ಯಾರಿಗೂ ತಿಳಿಸದೆ ಚಂದ್ರಾಭ ಪುರವನ್ನು ಬಿಟ್ಟು ಹೊರಟನು. ಪತಿಯ ಅಗಲಿಕೆಯಿಂದ ಪದ್ಮಾದೇವಿಯು ಅತಿಶಯ ದುಃಖಕ್ಕೊಳಗಾದಳು. ಲೋಕಪಾಲ ಮಹಾರಾಜನು ಜೀವಂಧರ ನನ್ನು ಎಲ್ಲಿದ್ದರೂ ಹುಡುಕಿ ಕರತರುವಂತೆ ಸೇವಕರನ್ನು ದಿಕ್ಕು ದಿಕ್ಕಿಗೆ ಅಟ್ಟಿದನು. ಆದರೆ ಅವರು ಜೀವಂಧರನನ್ನು ಹುಡುಕಿ ಹಿಡಿಯಲಾರದೆ ನಿರಾಶರಾಗಿ ಹಿಂತೆರಳಿದರು.

ಬಹುವೇಗವಾಗಿ ಹೊರಟು ಬಂದ ಜೀವಂಧರನು ತೀರ್ಥಂಕರರಿಂದ ಪಾವನಗಳಾದ ಹಲವಾರು ಪುಣ್ಯಕ್ಷೇತ್ರಗಳನ್ನು ಕಂಡು ನಮಿಸಿ ನಡೆದು ಬಂದ ಅರಣ್ಯ ಮಧ್ಯದ ಒಂದು ಋಷ್ಯಾಶ್ರಮವನ್ನು ಸೇರಿದನು. ಅಲ್ಲಿ ಕೆಲವರು ಮುನಿಗಳು ಮಾಡುತ್ತಿರುವ ಅಸತ್ತಪಸ್ಸನ್ನು ನೋಡಿದನು. ಅವರ ವಿಷಯ ದಲ್ಲಿ ದಯಾರ್ದ್ರಚಿತ್ತನಾದನು.

" ಕೂಪೇ ಪಿಪತಿಷುರ್ಬಾಲೋ ನಹಿ ಕೇನಾಪ್ಯುಪೇಕ್ಷ್ಯತೇ " ಬಾವಿಗೆ ಬೀಳುವ ಮಗುವನ್ನು ತಡೆಯದೆ ಯಾರು ಉಪೇಕ್ಷಿಸುವರು? ಅಂತೆಯೇ ತತ್ವಜ್ಞನಾದ ಜೀವಂಧರನು ಭ್ರಾಂತರಾಗಿರುವ ಆ ಮಿಥ್ಯಾದೃಷ್ಟಿಗಳಾದ ತಪಸ್ವಿಗಳಿಗೆ ತತ್ವಬೋಧೆಯನ್ನು ಮಾಡದೆ ಉಪೇಕ್ಷಿಸಲಾರದಾದನು. ಆದುದರಿಂದ ಆ ತಪಸ್ವಿಗಳನ್ನು ಕುರಿತು " ಎಲೈ ವಿದ್ವಾಂಸರೇ! ನೀವು ಮಾಡುತ್ತಿರುವ ಈ ಪಂಚಾಗ್ನಿ ತಪಸ್ಸು ಯೋಗ್ಯವಾದುದಲ್ಲ. ಇದು ಪ್ರಾಣಿ ಹಿಂಸಾಸ್ಪದವಾದುದು. ಹಿಂಸಾಪರವೂ ಪ್ರವೃತ್ತಿಪರವೂ ಆದ ತಪಸ್ಸು ತಪಸ್ಸಲ್ಲ. ಕಾಯಕ್ಲೇಶಕರವಾದ ತಪಸ್ಸು ಸಮ್ಯಗ್ದರ್ಶನ ಜ್ಞಾನಚಾರಿತ್ರ ಗಳಿಗೆ ಕಾರಣವಾದರೂ ಅನಾಪ್ತಗೋಚರವಾದ ರತ್ನತ್ರಯವು ಮೋಕ್ಷಕ್ಕೆ ಎಂದೆಂದೂ ಕಾರಣವಾಗಲಾರದು. ಆದುದರಿಂದ ನೀವು ಸಮಸ್ತ ದೋಷ ರಹಿತವಾದ, ಸರ್ವಜ್ಞರೆನಿಸಿದ ಅರ್ಹತ್ಪರಮೇಷ್ಠಿಗಳು ಮೊದಲಾಗಿ ತಿಳಿದಿರುವ ಸತ್ತಪಸ್ಸನ್ನು ಮಾಡುವವರಾಗಿರಿ. ಜಳ್ಳು ಭತ್ತವನ್ನು ಕುಟ್ಟುವಂತೆ ನಿಷ್ಫಲ ವಾದ ಈ ಅಸತ್ತಪಸ್ಸನ್ನು ಏಕೆ ಮಾಡುವಿರಿ " ಎಂದು ಎಚ್ಚರಿಸಿದನು. ಇವನ ಈ ಬೋಧನೆಯಿಂದ ಎಚ್ಚರಗೊಂಡ ಆ ತಪಸ್ವಿಗಳಲ್ಲಿ ಕೆಲವರು ಭವಾತ್ತರು ಅಹಿಂಸಾ ಲಕ್ಷಣ ಪರಮಧರ್ಮಾನುಷ್ಠಾನವರರಾದರು. ಅನಂತರ ಜೀವಂಧರನು ಈ ಆಶ್ರಮದಿಂದ ಹೊರಟು ದಕ್ಷಿಣದೇಶದಲ್ಲಿ ಪ್ರಸಿದ್ಧಕ್ಷೇತ್ರ ವೆನಿಸಿದ ಶ್ರೀ ವಿಮಾನವನ್ನು ಸೇರಿ ಅಲ್ಲಿಯ ಜಿನನಾಥನ ಸನ್ನಿಧಿಯಲ್ಲಿ ನಿಂತು ಹೀಗೆಂದು ಸ್ತುತಿಸಿದನು :—

ಭಗವನ್ದುರ್ನಯಧ್ವಾಂತೈರಾಕೀರ್ಣೇ ಪಥಿ ಮೇ ಸತಿ ।
ಸಂಜ್ಞಾನದೀಪಿಕಾಭೂಯಾತ್ಸಂಸಾರಾವಧಿ ವರ್ಧಿನೀ ॥ ೧ ॥

ಜನ್ಮಜೀರ್ಣಾಟವೀ ಮಧ್ಯೇ ಜನುಷಾಂಧಸ್ಯ ಮೇ ಸತಿ ।
ಸನ್ಮಾರ್ಗೇ ಭಗವನ್ಭಕ್ತಿರ್ಭವತಾನ್ಮುಕ್ತಿದಾಯಿನೀ ॥ ೨ ॥

ಸ್ವಾಪ್ತಶಾನ್ತಿಂ ಮುಪ್ಯೈಕಾಂತಾಮನೇಕಾಂತೈಕ ನಾಯಕ: ।
ಶಾನ್ತಿನಾಥೋ ಜಿನಃ ಕುರ್ಯಾತ್ಸಂಸೃತಿಕ್ಲೇಶ ಶಾಂತಯೇ ॥ ೩ ॥

[ ತಾತ್ಪರ್ಯ :— ಎಲೈ ಮಹಾಮಹಿಮೆಯುಳ್ಳ ಸ್ವಾಮಿಯೇ! ನನಗೆ ಸಂಸಾರವಿರುವವರೆಗೂ ಸಮ್ಯಗ್ಜ್ಞಾನದರ್ಶನ ಚಾರಿತ್ರವೆಂಬ ಮೋಕ್ಷ

ಮಾರ್ಗಕ್ಕೆ, ಮಿಥ್ಯಾದರ್ಶನಾದಿಗಳೆಂಬ ಕತ್ತಲೆಯು ಆಕ್ರಮಿಸದಂತೆ ಸರಿ ಜ್ಞಾನವೆಂಬ ದೀಪವು ವೃದ್ಧಿಹೊಂದುತ್ತಿರಲಿ. ಕರ್ಮಾನುಗುಣವಾದ ಅನೇಕ ಜನ್ಮಗಳೆಂಬ ಮಹಾರಣ್ಯ ಮಧ್ಯದಲ್ಲಿ ಹುಟ್ಟುಕುರುಡನಂತೆ ದಾರಿಕಾಣದೆ ದುಃಖಿಸುತ್ತಿರುವ ನನಗೆ, ಶ್ರೇಷ್ಠವಾದ ಮೋಕ್ಷಮಾರ್ಗದಲ್ಲಿ ಮೋಕ್ಷವನ್ನು ಕೊಡುತ್ತಿರುವ ಭಕ್ತಿಯು ಉಂಟಾಗುವಂತೆ ಅನುಗ್ರಹಿಸು. ಪ್ರಪಂಚವು ಅಸ್ತಿನಾಸ್ತ್ಯಾತ್ಮಕವಾಗಿಯೂ ಭೇದಾಭೇದಾತ್ಮಕವಾಗಿಯೂ ಇರುವುದೆಂದು ಸ್ಥಾಪಿಸುವ ಸ್ಯಾದ್ವಾದನ್ಯಾಯಕ್ಕೆ ಮುಖ್ಯಪ್ರತಿಪಾದಕ ಪ್ರಭುವಾದ ಶಾಂತಿ ನಾಥ ಸ್ವಾಮಿಯೆನಿಸುವ ಸಕಲ ಕರ್ಮಕ್ಷಯವನ್ನು ಹೊಂದಿರುವ ಜಿನನು ನನ್ನ ಸಂಸಾರ ದುಃಖ ನಿವೃತ್ತಿಗೋಸ್ಕರ ಸ್ಥಿರವಾದ ಮನಶಾಂತಿಯನ್ನು ಉಂಟುಮಾಡಲಿ. ]

ಈ ಪ್ರಕಾರ ಸ್ತೋತ್ರ ಮಾಡಲು ಆ ಸಹಸ್ರಕೂಟ ಜಿನಚೈತ್ಯಾಲಯ ಮುಚ್ಚಿದ್ದ ಬಾಗಿಲು ಅದರಷ್ಟಕ್ಕೇ ತೆರೆಯಿತು. ಅಷ್ಟರಲ್ಲಿ ಒಬ್ಬ ಪುರುಷನು ಜೀವಂಧರನ ಸಮೀಪಕ್ಕೆ ಧಾವಿಸಿ ಬಂದು ನಮಸ್ಕರಿಸಿದನು. ಬಳಿಕ "ಎಲೈ ಪೂಜ್ಯನೇ! ನೀನಾರೆಂದು ನಾನರಿಯೆನು. ನಾನಾದರೋ ಈ ಕ್ಷೇಮಪುರಿ ಪಟ್ಟಣದ ದೇವಾಂತ ಮಹಾರಾಜನ ಮಿತ್ರನಾದ ಸುಭದ್ರ ಶ್ರೇಷ್ಠಿಯ ಭೃತ್ಯನಾಗಿರುವೆನು. ನನ್ನ ಒಡೆಯನಿಗೆ ನಿರ್ವೃತಿಯೆಂಬ ಪತ್ನಿ ಯಲ್ಲಿ ಜನಿಸಿದ ಕ್ಷೇಮಶ್ರೀ ಎಂಬೊಬ್ಬಳು ಮಗಳಿರುವಳು. ಈಕೆಯ ಜನನಕಾಲದಲ್ಲಿ ದೈವಜ್ಞರು ಈ ಜಿನಚೈತ್ಯಾಲಯದ ಮುಚ್ಚಿದ್ದ ಬಾಗಿಲು ಯಾವ ಮಹಾತ್ಮನ ಮಹಿಮೆಯಿಂದ ತನಗೆ ತಾನೇ ತೆರೆಯುವುದೋ ಅವನೇ ಈಕೆಗೆ ಪತಿಯಾಗುವನೆಂದು ಭವಿಷ್ಯ ನುಡಿದಿದ್ದರು. ಅವರ ಮಾತಿ ನಲ್ಲಿ ವಿಶ್ವಾಸವಿಟ್ಟ ಶ್ರೇಷ್ಠಿಯು ಗುಣಭದ್ರನೆಂಬ ಹೆಸರುಳ್ಳ ನನ್ನನ್ನು ಇಲ್ಲಿ ಕಾವಲಿಗಾಗಿ ನೇಮಿಸಿರುವನು" ಎಂದು ಬಿನ್ನವಿಸಿಕೊಂಡನು. ಇಷ್ಟನ್ನು ಹೇಳಿದುದಲ್ಲದೆ ಬಾಗಿಲು ತೆರೆದುದೇ ಮೊದಲಾದ ಸಂಗತಿಗಳನ್ನು ತನ್ನೊ ಡೆಯನಿಗೂ ತಿಳಿಸಿದನು.

ಈ ಶುಭಸಮಾಚಾರವನ್ನು ಕೇಳಿದ ಶ್ರೇಷ್ಠಿಯು ಅಲ್ಲಿಗೆ ಬಂದು ಅರ್ಹತ್ಪರಮೇಷ್ಠಿಯ ಪೂಜೆಯಲ್ಲಿ ನಿರತನಾಗಿರುವ ಜೀವಂಧರನನ್ನು ನೋಡಿದನು. ಆಕಾರದರ್ಶನ ಮಾತ್ರದಿಂದಲೇ ಅವನ ಮಹಾತ್ಮ್ಯವು

ಶ್ರೇಷ್ಠಿಗೆ ಮನವರಿಕೆಯಾಯಿತು. ಜಿನಪೂಜಾನಂತರದಲ್ಲಿ ಜೀವಂಧರನಿಗೂ ಸುಭದ್ರಶ್ರೇಷ್ಠಿಗೂ ಪ್ರಥಮ ಪರಿಚಯಾನುಗುಣವಾದ ಸಂಭಾಷಣೆಯು ನಡೆಯಿತು. ಶ್ರೇಷ್ಠಿಯು ಒತ್ತಾಯದಿಂದ ಜೀವಂಧರನನ್ನು ತನ್ನ ಮನೆಗೆ ಕರೆದೊಯ್ದನು. ಕನ್ನಿಕೆಯನ್ನು ಪರಿಗ್ರಹಿಸಬೇಕಾಗಿ ಪ್ರಾರ್ಥಿಸಿಕೊಂಡನು. “ಆಶ್ರಯಂತೀಂ ಶ್ರಿಯಂ ಕೋವಾ ಪಾದೇನ ಭುವಿ ತಾಡಯೇತ್” ಎಂಬಂತೆ ತಾನಾಗಿಯೇ ಬಂದ ಸಂಪತ್ತನ್ನು ಯಾವನು ಕಾಲಿನಿಂದ ಒದೆಯುವನು? ಶ್ರೇಷ್ಠಿಯ ಪ್ರಾರ್ಥನೆಯನ್ನು ಮನ್ನಿಸಿ ಕ್ಷೇಮಶ್ರೀಯನ್ನು ಶಾಸ್ತ್ರೋಕ್ತ ರೀತಿಯಲ್ಲಿ ವಿವಾಹ ಮಾಡಿಕೊಂಡನು.

*+++++++++++*

## ಕಣಕಮಾಲಾ ಪರಿಣಯ

ಜೀವಂಧರನು ಹೊಸ ಹೆಂಡತಿಯಾದ ಕ್ಷೇಮಶ್ರೀಯೊಡನೆ ಕೆಲವು ಕಾಲ ಕ್ಷೇಮಪುರಿಯಲ್ಲೇ ಸುಖದಿಂದ ಕಾಲ ಕಳೆದನು. ಅಷ್ಟರಲ್ಲಿ ಅವನ ಮನಸ್ಸು ಮತ್ತೆ ತನ್ನ ಮೊದಲಿನ ತೀರ್ಥಾಟನೆಯ ಕಡೆಗೆ ಹರಿಯಿತು. ಆದರೆ ಈ ತನ್ನ ಬಯಕೆಯು ಕೇವಲ ಸಂಸಾರ ಸುಖಮಗ್ನರಾದ ನೂತನ ಬಂಧುಗಳಿಗೆ ಸೇರದೆಂದು ಭಾವಿಸಿ ಯಾರಿಗೂ ತಿಳಿಸದೆ ಒಂದಿರುಳು ಅಲ್ಲಿಂದ ಹೊರಟು ಹೋಗಿಬಿಟ್ಟನು. ಪತಿಪ್ರಾಣೆಯಾದ ಕ್ಷೇಮಶ್ರೀಯು ಈ ಪತಿವಿರಹದಿಂದ ದುಃಖಸಾಗರದಲ್ಲಿ ಮುಳುಗಿ ಬಿಟ್ಟಳು. ಸುಭದ್ರ ಶ್ರೇಷ್ಠಿಯು ಅಳಿಯನನ್ನು ಹುಡುಕಿಸಿ ವಿಫಲನಾಗಿ ಅತೀವ ಚಿಂತೆಗೊಳಗಾದನು.

ಇತ್ತ ಬಂಧುಗಳಾರಿಗೂ ಸಿಗದೆ ಮಾರ್ಗಕ್ರಮಣ ಮಾಡುತ್ತಿದ್ದ ಜೀವಂಧರನಿಗೆ ತಾನು ಧರಿಸಿರುವ ಹಾರಕೇಯೂರಾದ್ಯಾಭರಣಗಳು ದೋಷಾಸ್ಪದಗಳಾಗಿಯೂ ಭಾರಭೂತಗಳಾಗಿಯೂ ತೋರಿದುವು. ಇವುಗಳನ್ನು ಧಾರ್ಮಿಕರಾರಿಗಾದರೂ ಒಪ್ಪಿಸುವುದೇ ವಿಹಿತವೆಂದು ನಿಶ್ಚಯಿಸಿ ಸತ್ಪಾತ್ರರನ್ನು ಹುಡುಕುತ್ತಿರುವಲ್ಲಿ ಪಾಮರನೊಬ್ಬನ ದರ್ಶನವಾಯಿತು. ಸರ್ವರನ್ನೂ ಗೌರವದಿಂದಲೂ ಆದರದಿಂದಲೂ ಕಾಣುತ್ತಿದ್ದ ಜೀವಂಧರನು

ಆತನ ಸ್ಥಿತಿಗತಿಗಳನ್ನು ವಿಚಾರಿಸಿದನು. ಅವನು ಉತ್ತರವಾಗಿ " ನಾನೊಬ್ಬ ಬಡವನು. ಜೀವನನಿರ್ವಾಹಕ್ಕಾಗಿ ಏನಾದರೊಂದು ಉದ್ಯೋಗವನ್ನು ಹುಡುಕುತ್ತ ಸಂಚರಿಸುತ್ತಿರುವೆನು. ಈಗ ತಮ್ಮ ದರ್ಶನವಾದುದು ನನ್ನ ಭಾಗ್ಯೋದಯಕ್ಕೆಂದೇ ಭಾವಿಸುವೆನು", ಎಂದು ಬಿನ್ನವಿಸಿಕೊಂಡನು. ಇದನ್ನು ಕೇಳಿ ಜೀವಂಧರನಿಗೆ ಆತನಲ್ಲಿ ಕರುಣೆ ಹುಟ್ಟಿತಾದರೂ ತಾನೀವ ದಾನಕ್ಕೆ ತಕ್ಕುದಾದ ವಸ್ತು ಯಥಾರ್ಥ್ಯಜ್ಞಾನ ಭೋಗಾಭೋಗ ವಿವೇಕಾದಿ ಗುಣಗಳಿಂದ ಕೂಡಿದ ಅರ್ಹತೆಯನ್ನು ಕಾಣಲಿಲ್ಲ. ಅದಕ್ಕಾಗಿ ದಾನವಿಧಿಯನ್ನು ತಿಳಿದಿರುವ ಜೀವಂಧರನು ಅವನಲ್ಲಿ ಪ್ರತಿಗ್ರಹಾರ್ಹತೆಯನ್ನುಂಟು ಮಾಡಬೇಕೆಂದು ಬಗೆದು ಈ ರೀತಿ ಧರ್ಮಬೋಧೆಯನ್ನು ಮಾಡತೊಡಗಿದನು:—

"ಎಲೈ ಕೃಷಿಜೀವಿಯೇ ಜೀವನೋಪಾಯಗಳಾದ ಷಟ್ಕರ್ಮಗಳಿಂದ ಉಂಟಾಗುವ ಸಂಸಾರ ಸುಖವು ಸುಖಾಭಾಸವೇ ಹೊರತು ಯಥಾರ್ಥವಲ್ಲ. ಸ್ವಾಸ್ಥ್ಯಸುಖವೇ ನಿಜವಾದ ಸುಖವು. ಇದು ಸಮ್ಯಗ್ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್ಚಾರಿತ್ರಗಳೆಂಬ ರತ್ನತ್ರಯಗಳಿಂದ ಮಾತ್ರ ಸಾಧ್ಯವು. ಆತ್ಮನೇ ಸ್ವಪದಾರ್ಥವು. ಇದಕ್ಕಿಂತ ಭಿನ್ನವಾದ ದೇಹ, ದೇಹಾನುಬಂಧಿಗಳಾದ ಪತ್ನಿಪುತ್ರಾದಿ ಸಮಸ್ತ ಸಂಪತ್ತೂ ಪರವಸ್ತುವು. ಆತ್ಮನು ಪರವಸ್ತುವಾದ ದೇಹವನ್ನೇ ತಾನೆಂದು ಭ್ರಮಿಸಿ ಅಜ್ಞಾನದಿಂದ ರಾಗದ್ವೇಷಕ್ಕೊಳಗಾಗಿ ಪಾಪಕರ್ಮಗಳನ್ನು ಮಾಡುವನು ಇದರ ಫಲವಾಗಿ ನಾನಾಭವಗಳಲ್ಲಿ ಮತ್ತೆ ಮತ್ತೆ ಸುತ್ತುತ್ತಿರುವನು. ತತ್ವಜ್ಞಾನದಿಂದ ಮಾತ್ರ ಈ ದೇಹಾತ್ಮ ಭ್ರಾಂತಿಯಳಿದು ಸಿದ್ಧಪರಮೇಷ್ಠಿಸ್ವರೂಪವು ಪ್ರಾಪ್ತಿಯಾಗುವುದು ಆದುದರಿಂದ ಮನುಷ್ಯನು ಧರ್ಮಸಂಪಾದನೆಯಲ್ಲಿ ಮನಸ್ಸಿಟ್ಟು ಈ ಶರೀರಾನುಬಂಧಿಗಳಾದ ಪರಿಗ್ರಹಗಳಲ್ಲಿ ಉಪೇಕ್ಷೆಯನ್ನು ತಾಳಬೇಕು. ಹೀಗೆ ಉಪೇಕ್ಷೆಯನ್ನು ತಾಳಿ ವೈರಾಗ್ಯಶಾಲಿಗಳಾದವರಲ್ಲಿ ಅನಗಾರರೆಂತಲೂ ಸಾಗಾರರೆಂತಲೂ ಎರಡು ಪ್ರಕಾರದವರಿರುವರು. ಈ ಯತಿಗಳೇ ಕ್ಷಮಾದಿ ದಶಧರ್ಮಗಳನ್ನು ಪಾಲಿಸಲು ಸಮರ್ಥರಾಗುವರು. ನೀನಾದರೋ ಈಗ ಇವುಗಳನ್ನು ಪಾಲಿಸಲು ಅಸಮರ್ಥನಾಗಿರುವಿ. ಆದುದರಿಂದ ನೀನು ಮೊದಲು ಗೃಹಸ್ಥಧರ್ಮವನ್ನು ಅಂಗೀಕರಿಸು. ಮುಂದೆ

ಕ್ರಮವಾಗಿ ಯತಿಧರ್ಮವನ್ನು ಆಶ್ರಯಿಸಲು ಸಮರ್ಥನಾಗುವಿ. ಮೂರು ಪ್ರಕಾರವಾದ ಗುಣವ್ರತವನ್ನೂ ನಾಲ್ಕು ಪ್ರಕಾರವಾದ ಶಿಕ್ಷಾವ್ರತವನ್ನೂ ಐದು ಪ್ರಕಾರವಾದ ಅಣುವ್ರತವನ್ನೂ ಪಾಲಿಸುವವರು ತತ್ವಾರ್ಥ ಶ್ರದ್ಧಾನುರೂಪವಾದ ಸಮ್ಯಗ್ದರ್ಶನಶಾಲಿಗಳಾದವರು. ಸೂಕ್ಷ್ಮ ಹಿಂಸಾದಿ ದೋಷಗಳಿಗೆ ಆಸ್ಪದರಾಗಿರುವವರು ಗೃಹಸ್ಥರೆನಿಸುವರು. ನೀನು ಈಗ ಇಂತಹ ಶ್ರಾವಕಪದವನ್ನು ಸ್ವೀಕರಿಸು." ಎಂದು ಈ ರೀತಿ ಧರ್ಮಬೋಧೆ ಯನ್ನು ಮಾಡಿ ಪಾಮರನನ್ನು ಪ್ರತಿಗ್ರಹಾರ್ಹನನ್ನಾಗಿ ಮಾಡಿದನು.

ಬಳಿಕ ತನ್ನ ಅನರ್ಘ್ಯರತ್ನಾಭರಣಗಳನ್ನು ಆತನಿಗೆ ದಾನ ಮಾಡಿದನು. ಮತ್ತು ಬಹಳವಾಗಿ ಸಂತೋಷಪಟ್ಟನು. "ದಾನೇ ಹಿ ಸತಾಂ ತುಷ್ಯತಿ ಮಾನಸಂ" ಎಂಬಂತೆ ಸತ್ಪುರುಷರಿಗೆ ತ್ಯಾಗದಲ್ಲೇ ತೃಪ್ತಿಯು. ದಾನ ಪಡೆದ ಆ ಪುರುಷನು ಶ್ರೇಷ್ಠ ಧರ್ಮಾರ್ಥಗಳು ದೊರೆತುದರಿಂದ ಆನಂದಿತ ನಾದನು.

ಜೀವಂಧರನು ಅಲ್ಲಿಂದ ಮುಂದಕ್ಕೆ ನಡೆದು ಒಂದು ಮಹಾರಣ್ಯವನ್ನು ಸೇರಿದನು. ದಾರಿ ನಡೆದು ಬಳಲಿ ವಿಶ್ರಾಂತಿಗಾಗಿ ಒಂದೆಡೆ ಕುಳಿತಿದ್ದನು. ಅಷ್ಟರಲ್ಲಿ ಅಲ್ಲಿಗೆ ಸುಂದರಿಯೋರ್ವಳು ಬಂದಳು. ಜೀವಂಧರನ ರೂಪ ವನ್ನು ಕಂಡೊಡನೆ ಆಕೆಯಲ್ಲಿ ಮೋಹವಂಕುರಿಸಿತು. ಪರೇಂಗಿ ತಜ್ಞನಾದ ಜೀವಂಧರನಿಗೆ ಇದು ತಿಳಿಯಿತು. ಆದರೂ ಅನಾಸಕ್ತನಾಗಿಯೇ ಇದ್ದನು. ಇಷ್ಟೇ ಅಲ್ಲ ಆತ್ಮಹಿತಾರ್ಥವಾಗಿ ಅಲ್ಲಿಂದ ಬೇರೆಡೆಗೆ ಹೋಗುವುದೇ ಒಳಿ ತೆಂದು ಯೋಚಿಸಿ ಹೊರಡಲನುವಾದನು. ಜೀವಂಧರನ ವೈರಾಗ್ಯದ ಅರಿವು ಆಕೆಗಾಯಿತು. ಹೇಗಾದರೂ ಈತನ ಮನಸ್ಸನ್ನು ತನ್ನೆಡೆಗೆ ಸೆಳೆದುಕೊಳ್ಳ ಬೇಕೆಂದು "ಎಲೈ ಭಾಗ್ಯಶಾಲಿಯೇ! ನಾನೋರ್ವ ಅನಾಥೆಯಾದ ವಿದ್ಯಾಧರ ಕನ್ನಿಕೆಯು. ಅನಂಗಲತಿಕಾ ಎಂಬುದು ನನ್ನ ಹೆಸರು. ನನ್ನ ಭಾವಮೈದುನನು ನನ್ನನ್ನು ಬಲಾತ್ಕಾರದಿಂದ ಇಲ್ಲಿಗೆ ಕರೆದು ಕೊಂಡು ಬಂದು ತನ್ನ ಹೆಂಡತಿಯ ಭಯದಿಂದ ಇಲ್ಲೇ ನನ್ನನ್ನು ಅನಾಥಳನ್ನಾಗಿ ಮಾಡಿ ಬಿಟ್ಟು ಹೊರಟುಹೋದನು. ನೀನು ಅನಾಥ ರಕ್ಷಕನಲ್ಲವೇ? ನನ್ನನ್ನು ಕಾಪಾಡು" ಎಂದು ಭಾವಗರ್ಭಿತವಾದ ವಂಚ ನೆಯ ಮಾತನ್ನಾಡಿದಳು.

ಇಷ್ಟರಲ್ಲಿ “ ನನ್ನ ಹೆಂಡತಿಯು ಎಲ್ಲಿ ಹೋದಳೋ ಏನಾದಳೋ ನನ್ನ ಪ್ರಾಣಗಳು ಹೋಗುತ್ತಿವೆ ” ಎಂದು ಕೂಗುವ ದೀನಧ್ವನಿಯೊಂದು ಅನತಿದೂರದಲ್ಲೇ ಕೇಳಿಸಿತು. ಅದು ಕೇಳಿದುದೇ ತಡ ಆ ಸ್ತ್ರೀಯು ಯಾವುದೋ ಒಂದು ನೆಪವನ್ನು ಹುಡಿದು ಮರೆಯಾಗಿ ಬಿಟ್ಟಳು. ಆಗ ಕೂಗಿಕೊಂಡ ಆ ಪುರುಷನು ಅಲ್ಲಿಗೆ ಬಂದು ಜೀವಂಧರನನ್ನು ಕಂಡನು. ಈ ಮಹಾಪುರುಷನೊಡನೆ ಹೇಳಿಕೊಂಡರೆ ತನ್ನ ದುಃಖ ನಿವೃತ್ತಿಯಾಗಿ ಇಷ್ಟಸಿದ್ಧಿಯಾಗುವುದೆಂದು ತನ್ನಲ್ಲೇ ಯೋಚಿಸಿ “ಎಲೈ ಪೂಜ್ಯನೇ ! ಈ ಕಾಡಿನಲ್ಲಿ ಬಾಯಾರಿಕೆಯಿಂದ ಪೀಡಿತಳಾದ ನನ್ನ ಪತಿವ್ರತಾ ಸತಿಯನ್ನು ಬಿಟ್ಟು ನೀರು ತರುವುದಕ್ಕಾಗಿ ಹೋಗಿದ್ದೆನು. ಹಿಂದಿರುಗಿ ಬಂದು ನೋಡಲು ಆಕೆಯು ಕಾಣಲಿಲ್ಲ. ವಿದ್ಯಾಧರೋಚಿತವಾದ ವಿದ್ಯೆಯು ನನ್ನಲ್ಲಿದ್ದರೂ ಅದೀಗ ಪ್ರಯೋಜನಕ್ಕೆ ಬಾರದಾಗಿದೆ. ನೀನಾದರೂ ನನಗೆ ಕರ್ತವ್ಯವನ್ನು ತಿಳಿಸಲಾರೆಯಾ ?” ಎಂದು ಬೇಡಿಕೊಂಡನು

ಜೀವಂಧರನು ದೀನವತ್ಸಲನು. ನಿರ್ಭಯನು. ಆದರೆ ಈ ಸ್ತ್ರೀಯ ವಂಚನೆಗೆ ಬೆದರಿದನು. ಕೊನೆಗೆ ಆರ್ತನಾಗಿ ಪ್ರಾರ್ಥಿಸುವ ಖೇಚರನಿಗೆ ಧರ್ಮತತ್ವವನ್ನುಪದೇಶಿಸುವುದೇ ವಿಹಿತವೆಂದು ಬಗೆದನು. ಮತ್ತೆ “ ಎಲೈ ಖೇಚರನೇ! ನೀನು ವಿದ್ಯಾಧರನಾಗಿದ್ದರೂ ವ್ಯರ್ಥವಾಗಿ ದುಃಖಿಸುವ ಯೇಕೆ ? ವಿದ್ಯೆಯಿರುವಲ್ಲಿ ಪಡೆಯಲಶಕ್ಯವಾದ ವಸ್ತುವಾವುದಿದೆ? ಶೋಕ ವೊದಗಿದಾಗ ಶೋಕಿಸದಿರುವುದೇ ಪ್ರಾಜ್ಞರ ಸ್ವಭಾವವು. ನೀನೇ ಹೀಗೆ ಶೋಕಿಸುವುದಾದರೆ ವಿದ್ಯಾವಂತನಿಗೂ ಅವಿದ್ಯಾವಂತನಿಗೂ ಭೇದವೆಲ್ಲಿ ಉಳಿಯಿತು? ದಯಾರಹಿತಳೂ, ಶುಷ್ಕಹೃದಯಳೂ, ಕ್ರೂರಸ್ವಭಾವ ದವಳೂ, ಅಕಾರ್ಯಪ್ರವರ್ತಕಳೂ, ಪಾಪಿಷ್ಠಳೂ ಆಗಿರುವ ಹೆಂಡತಿಯಲ್ಲಿ ನೀನೇಕೆ ಇಷ್ಟು ವ್ಯಾಮೋಹವನ್ನಿಟ್ಟಿರುವಿ? ಅವನ್ನು ಬಿಟ್ಟುಬಿಡು” ಎಂದು ಉಪದೇಶಿಸಿದನು. ಆದರೆ ಈ ಉಪದೇಶವು ಆತನಲ್ಲಿ ಯಾವ ಪರಿಣಾಮ ವನ್ನು ಉಂಟುಮಾಡಲಿಲ್ಲ.

ಜೀವಂಧರನು ಈತನ ಮೌಢ್ಯಕ್ಕೆ ಮರುಗುತ್ತ ಅಲ್ಲಿಂದ ಹೊರಟು ಅತಿ ಸುಂದರವಾದ ಒಂದು ಉದ್ಯಾನಕ್ಕೆ ಬಂದು ಸೇರಿದನು. ಅಲ್ಲಿ ಒಬ್ಬನು ಧನುಸ್ಸಿನಿಂದ ಮಾವಿನ ಹಣ್ಣೊಂದನ್ನು ಉದುರಿಸಲು ಯತ್ನಿಸಿ

ವಿಫಲನಾಗಿ ಕುಳಿತಿದ್ದನು. ಜೀವಂಧರನು ಈ ವಿಚಾರವನ್ನು ತಿಳಿದು ಒಂದೇ ಹೊಡೆತದಿಂದ ಆ ಹಣ್ಣನ್ನು ಆತನಿಗೆ ಕೆಡವಿ ಕೊಟ್ಟನು. ಆತನು ಜೀವಂಧರನ ಸಾಹಸಕೃತ್ಯಕ್ಕೆ ಆಶ್ಚರ್ಯಪಟ್ಟು ಭಯಭಕ್ತಿಗಳಿಂದ ತನ್ನ ವೃತ್ತಾಂತವನ್ನು ವಿವರಿಸತೊಡಗಿದನು. "ಎಲೈ ಧನುರ್ವಿದ್ಯಾ ಪಂಡಿತನೇ! ಈ ಹೇಮಾಭಾ ಎಂಬ ಪಟ್ಟಣದ ಅರಸನಾದ ದೃಢಮಿತ್ರನಿಗೆ ನಳಿನಾದೇವಿಯಲ್ಲಿ ಜನಿಸಿದ ಸುಮಿತ್ರನೇ ಮೊದಲಾದ ರಾಜಪುತ್ರರೊಳಗೆ ನಾನೊಬ್ಬನಾಗಿರುವೆನು. ಸಹೋದರರಾದ ನಾವೆಲ್ಲರೂ ಪ್ರಾಯಭರಿತರಾಗಿದ್ದರೂ ವಿದ್ಯಾವಿಹೀನರಾಗಿರುವೆವು. ನಮ್ಮನ್ನು ಬಿಲ್ಲು ವಿದ್ಯಾವಿಶಾರದವರನ್ನಾಗಿ ಮಾಡಬೇಕೆಂದು ನಮ್ಮ ತಂದೆಯು ಒಬ್ಬ ಧನುರ್ವಿದ್ಯಾ ಪಂಡಿತನನ್ನು ಹುಡುಕುತ್ತಿದ್ದಾನೆ. ತಮಗೆ ಪ್ರಕೃತಕಾರ್ಯಕ್ಕೆ ಕುಂದಕವಿಲ್ಲದೇ ಇದ್ದರೆ ನಮ್ಮ ತಂದೆಯ ಬಳಿಗೆ ಬರುವ ಕೃಪೆದೋರಬೇಕು" ಎಂದು ಬಿನ್ನವಿಸಿದನು

ಜೀವಂಧರನು ರಾಜಪುತ್ರನ ಪ್ರಾರ್ಥನೆಯಂತೆ ದೃಢಮಿತ್ರರಾಜನ ಬಳಿಗೆ ಬಂದನು. ಈರ್ವರೂ ದರ್ಶನ ಮಾತ್ರದಿಂದಲೇ ಪರಸ್ಪರ ಯೋಗ್ಯತೆಗಳನ್ನರಿತುಕೊಂಡರು. ರಾಜನು ತನ್ನ ಪುತ್ರರನ್ನು ಧನುರ್ವಿದ್ಯಾ ಪಾರಂಗತರನ್ನಾಗಿ ಮಾಡಬೇಕೆಂದು ಜೀವಂಧರನನ್ನು ಪ್ರಾರ್ಥಿಸಿಕೊಂಡನು. "ಸ್ವಯಂ ದೇಯಾ ಸತೀ ವಿದ್ಯಾ ಪ್ರಾರ್ಥನಾಯಾಂತು ಕಿಂ ಪುನಃ" ಎಂಬಂತೆ ಗುರುವು ತಾನಾಗಿಯೇ ದಯೆಯಿಂದ ವಿದ್ಯೆಯನ್ನು ಕಲಿಸಬೇಕು. ಹೀಗಿರಲು ಪ್ರಾರ್ಥಿಸಿದರೂ ಕಲಿಸದಿರುವುದೇ? ಇವಲ್ಲದೆ "ಕೃತಾರ್ಥಾನಾಂ ಹಿ ಪಾರಾರ್ಥ್ಯಮೈಹಿಕಾರ್ಥ ಪರಾಙ್ಮುಖಮ್" ಕೃತಾರ್ಥರಾದ ಮಹಾಪುರುಷರಿಗೆ ಪರೋಪಕೃತಿಯಲ್ಲಿಯೇ ಆಸಕ್ತಿ ಹೊರತು ತಮ್ಮ ಐಹಿಕ ಪ್ರಯೋಜನದಲ್ಲಿ ಆಸಕ್ತಿಯಿಲ್ಲ. ಆದುದರಿಂದ ಜೀವಂಧರನು ರಾಜನ ಪ್ರಾರ್ಥನೆಯನ್ನು ಮನ್ನಿಸಿ ರಾಜಪುತ್ರರಿಗೆ ಧನುರ್ವಿದ್ಯೆಯನ್ನು ಕಲಿಸಲು ಒಪ್ಪಿಕೊಂಡನು. ಸುಮಿತ್ರನೇ ಮೊದಲಾದ ರಾಜಪುತ್ರರು ತಮ್ಮ ವಿನಯಾದಿಗುಣಗಳಿಂದ ಜೀವಂಧರನಿಗೆ ಒಪ್ಪುವ ಶಿಷ್ಯರಾಗಿದ್ದರು.

ಅತ್ಯಲ್ಪ ಕಾಲದಲ್ಲೇ ಜೀವಂಧರನು ಅವರನ್ನು ಧನುರ್ವಿದ್ಯಾ ಪಾರಂಗತರನ್ನಾಗಿ ಮಾಡಿದನು. ಅರಸನಿಗೆ ಇದರಿಂದ ಬಹಳ ಸಂತೋ

ಷವಾಯಿತು. ಆದರೆ ಜೀವಂಧರನಿಗೆ ಪ್ರತಿಯಾಗಿ ಏನನ್ನಿತ್ತು ಕೃತಕೃತ್ಯ ನಾಗುವೆನೆಂಬುದೇ ಅರಸನಿಗೆ ದೊಡ್ಡ ಚಿಂತೆಯಾಯಿತು. ಕೊನೆಗೆ ತನ್ನ ಪುತ್ರಿಯನ್ನೇ ಪ್ರತ್ಯುಪಕಾರವಾಗಿ ಈತನಿಗೊಪ್ಪಿಸಿ ಬಿಡುವೆನೆಂದು ನಿಶ್ಚಯಿಸಿ ತನ್ನ ಇಂಗಿತವನ್ನು ತಿಳಿಸಿದನು. ಆದರೆ ಜೀವಂಧರನು ಮೊದಲು ಈ ಮಾತಿಗೊಪ್ಪಲಿಲ್ಲ. "ಉದಾರಾ: ಖಲು ಮನ್ಯಂತೇ ತೃಣಾಯೇದಂ ಜಗತ್ರಯಂ" ಉತ್ತಮರು ಮೂರುಲೋಕವನ್ನೂ ತೃಣಕ್ಕೆ ಸಮಾನವಾಗಿ ತಿಳಿಯತಕ್ಕವರು. ಅರಸನು ಜೀವಂಧರನನ್ನು ಬರಿಗೈಯಲ್ಲಿ ಕಳುಹಿಸಲು ಇಷ್ಟಪಡಲಿಲ್ಲ. ಹೇಗಾದರೂ ಒಡಂಬಡಿಸಿದನು. ಪುತ್ರಿಯಾದ ಕನಕ ಮಾಲೆಯನ್ನು ಧಾರೆಯೆರೆದಿತ್ತನು. ಜೀವಂಧರ ಕನಕಮಾಲೆಯರ ಪರಿ ಣಯವು ವೈಭವದಿಂದ ಜರಗಿತು.



## ವಿಮಲಾ ಪ್ರತಿಗ್ರಹ

ದೇಶಸಂಚಾರಾರ್ಥವಾಗಿ ಹೊರಟ ಜೀವಂಧರನು ಕನಕಮಾಲೆಯ ಕೈಹಿಡಿದು ಬಹುಕಾಲ ಆ ಪಟ್ಟಣದಲ್ಲೇ ಉಳಿದನು. ವಿವೇಕಿಯಾದ ಇವನ ಮುಂಬಯಣವನ್ನು ಸ್ತ್ರೀವ್ಯಾಮೋಹವು ತಡೆಯದಿದ್ದರೂ ಸುಮಿತ್ರನೇ ಮೊದಲಾದವರ ವಾತ್ಸಲ್ಯವು ತಡೆಯದಿರಲಿಲ್ಲ. ಬೇಸರವಿಲ್ಲದೆ ವರ್ಷಕಾಲವು ಕ್ಷಣಕಾಲದಂತೆ ಸಂದಿತು.

ಹೀಗಿರಲು ಒಂದು ಹೆಂಗಸೊಬ್ಬಳು ನಗನಗುತ್ತ ಜೀವಂಧರನ ಬಳಿಗೆ ಬಂದಳು ಅದೇನೋ ತಿಳಿಯ ಕೇಳುವ ಔತ್ಸುಕ್ಯಭಾವವು ಅವಳ ಮುಖ ದಲ್ಲಿ ಪ್ರಕಟಗೊಳ್ಳುತ್ತಿತ್ತು. ಜೀವಂಧರನು ಬರವಿನ ಕಾರಣವನ್ನು ವಿಚಾರಿ ಸಲು ಆಕೆಯು "ಆಯುಧಶಾಲೆಯಲ್ಲಿಯೂ ಇಲ್ಲಿಯೂ ನಿಮ್ಮನ್ನು ಏಕ ಕಾಲದಲ್ಲಿ ಕಂಡೆನಲ್ಲಾ ಇದೇನು ಆಶ್ಚರ್ಯ? ಎಂದು ಕೇಳಿದಳು ಜೀವಂಧ ರನಿಗೂ ಈ ಮಾತು ಕೇಳಿ ಆಶ್ಚರ್ಯವಾಯಿತು. ತಮ್ಮನಾದ ನಂದಾಢ್ಯ ನೇನಾದರೂ ಇಲ್ಲಿಗೆ ಬಂದಿರಬಹುದೇ ಎಂಬ ಸಂದೇಹವೂ ಅಂಕುರಿಸಿತು. ಒಡನೆ ಮನಸ್ಸು ನಂದಾಢ್ಯನನ್ನು ಕಂಡೇ ಕಂಡಿತು. ದೇಹವು ಆಯುಧಶಾಲೆ

ಯಿತ್ತು ಧಾವಿಸಿತು. ಅಲ್ಲಿ ನಂದಾಢ್ಯನಿದ್ದನು. ಅವನನ್ನು ಕಂಡು ಜೀವಂಧರನು ಅತ್ಯಂತ ಹರ್ಷಿತನಾದನು. ನಂದಾಢ್ಯನೂ ಅಣ್ಣನ ದರ್ಶನದಿಂದ ಬಹುಕಾಲದ ಭ್ರಾತೃವಿಯೋಗ ದುಃಖವನ್ನು ಮರೆತನು. ಜೀವಂಧರನು ತಮ್ಮನೊಡನೆ ನೀನಿಲ್ಲಿಗೆ ಬಂದುದು ಹೇಗೆಂದು ರಹಸ್ಯದಲ್ಲಿ ವಿಚಾರಿಸಿದನು.

ಅದಕ್ಕೆ ಉತ್ತರವಾಗಿ ನಂದಾಢ್ಯನು:— "ಅಣ್ಣಾ ! ಹಿಂದೆ ಆ ಕಾಷ್ಠಾಂಗಾರನ ದ್ರೋಹದ ಫಲವಾಗಿ ತಮ್ಮ ಅಗಲಿಕೆಯಾಯಿತಷ್ಟೇ! ಅಂದಿನಿಂದ ನಾನು ಮೃತಪ್ರಾಯನಾದೆನು. ಮರಣವೇ ತನಗೆ ಲೇಸೆಂದು ತೋರಿತು. ಅಷ್ಟರಲ್ಲಿ ವಿದ್ಯಾಧರ ಪುತ್ರಿಯಾದ ಅತ್ತಿಗೆಯು ಯಾರು ಎಲ್ಲಿದ್ದರೂ ತಿಳಿಯಬಲ್ಲ ವಿದ್ಯಾಬಲವುಳ್ಳವಳೆಂಬ ಸಂಗತಿಯು ನೆನಪಿಗೆ ಬಂತು. ತಮ್ಮ ಸಮಾಚಾರವನ್ನು ಆಕೆಯಿಂದ ತಿಳಿದುಕೊಳ್ಳಬಹುದೆಂಬಾಶೆಯಿಂದ ಹೋಗಿ ವಿಚಾರಿಸಿದೆನು. ಅವಳು ತನ್ನ ವಿದ್ಯಾಬಲದಿಂದ ತಮ್ಮ ಪ್ರಕೃತದ ಇರುವಿಕೆ, ಈ ವರೆಗಿನ ಸಂಚಾರದ ವಿವರ, ಕನ್ಯಾಸ್ವೀಕರಣ ಪರಂಪರೆ ಮೊದಲಾದುವನ್ನು ತಿಳಿದು ನನಗೆ ವಿವರಿಸಿದಳು. ಅಲ್ಲದೆ ಪತಿಯಾದ ತಮ್ಮ ಬಳಿಗೆ ಬರುವ ವಿಷಯದಲ್ಲಿ ತನಗಿರುವ ಅಸ್ವತಂತ್ರತೆಯನ್ನೂ ತಿಳಿಸಿದಳು. ನನಗೆ ಹೋಗಲು ಅನುಮತಿಗೊಟ್ಟು ಈ ಕ್ಷೇಮಸಮಾಚಾರ ಪತ್ರವನ್ನು ಕೈಗಿತ್ತು ಹಾಸಿಗೆಯೊಂದರ ಮೇಲೆ ಮಲಗುವಂತೆ ಆಜ್ಞಾಪಿಸಿದಳು. ಅಂತೆ ಮಲಗಿದ ನನ್ನ ಮೇಲೆ ವಿದ್ಯೆಯಿಂದ ಅಭಿಮಂತ್ರಿಸಿದಳು. ಅವಳ ಆ ಮಂತ್ರಜಲದಿಂದ ನಾನು ಈ ಆಯುಧ ಶಾಲೆಗೊಯ್ಯಲ್ಪಟ್ಟೆನು" ಎಂದು ನುಡಿದು ಪತ್ರವನ್ನು ಕೊಟ್ಟನು.

ಜೀವಂಧರನು ತಮ್ಮನ ಹೇಳಿಕೆಯನ್ನು ಆದ್ಯಂತವಾಗಿ ಕೇಳಿದನು. ಗುಣಮಾಲೆಯ ಹೆಸರಿನಿಂದ ಗಂಧರ್ವದತ್ತೆಯು ಬರೆದ ಪತ್ರವನ್ನು ಓದಿಸಿದನು. ತನ್ನ ಅಗಲಿಕೆಯಿಂದಾಗಿ ಆತ್ಮೀಯರು ಪಡುತ್ತಿರುವ ಭಂಗಕ್ಕೆ ವ್ಯಸನಪಟ್ಟನು "ನ ಹಿ ಪ್ರಸಾದ ಖೇದಾಭ್ಯಾಂ. ವಿಕ್ರಿಯಂ ತೇ ವಿವೇಕಿನಃ" ಎಂಬಂತೆ ವಿವೇಕಿಯಾದುದರಿಂದ ಅದನ್ನು ಹೊರಗೆ ತೋರ್ಪಡಿಸಲಿಲ್ಲ.

ಇಷ್ಟರಲ್ಲಿ ನಂದಾಢ್ಯನು ಬಂದ ಸಮಾಚಾರವು ಅರಮನೆಯವರಿಗೆಲ್ಲ ತಿಳಿದು, ದೃಢಮಿತ್ರ ಮಹಾರಾಜನ ಕಿವಿಗೆ ಮುಟ್ಟಿತು. ಒಡನೆ ಅರಸನು

ತನ್ನ ಅಳಿಯನ ತಮ್ಮನಾದ ಈತನನ್ನು ಅರಮನೆಗೆ ಕರೆಯಿಸಿ ಆದರದಿಂದ ಸತ್ಕರಿಸಿದನು. ಎಲ್ಲರೂ ಸಂತೋಷದಿಂದಿರುತ್ತಿದ್ದರು. ಒಂದು ದಿನ ದೃಢಮಿತ್ರ ಮಹಾರಾಜನು ಜೀವಂಧರ ನಂದಾಢ್ಯರೊಡನೆ ಸುಖಸಂಕಥಾ ವಿನೋದದಿಂದಿರಲು ಆತನ ಪ್ರಜಾಕೋಟಿಗೆ ಸೇರಿದ ಕೆಲವರು ಗೊಲ್ಲರು "ನಮ್ಮ ಗೋವುಗಳನ್ನು ಶತ್ರುಗಳು ಅಪಹರಿಸಿರುವರು ರಕ್ಷಿಸಿರಿ ರಕ್ಷಿಸಿರಿ" ಎಂದು ಗೋಳಿಡುತ್ತಾ ಬಂದು ಅರಸನಿಗೆ ದೂರಿಟ್ಟರು. ಪ್ರಜಾವತ್ಸಲನಾದ ದೃಢಮಿತ್ರನು ಪ್ರಜೆಗಳ ಮೊರೆಯನ್ನು ಕೇಳಿ ಸಹಿಸದೆ ಅವರ ವಿಪತ್ಪರಿಹಾರಾರ್ಥವಾಗಿ ಹೊರಡಲನುವಾದನು. ಇದನ್ನು ತಿಳಿದ ಜೀವಂಧರನು ಆ ಕಾರ್ಯಕ್ಕೆ ತಾನಾಗಿ ಮುಂದೆ ಬಂದನು. ಅರಸನೊಪ್ಪಲಿಲ್ಲ. ಜೀವಂಧರನು ಕೇಳಲಿಲ್ಲ. ಗೋಧನವನ್ನು ತಾನೇ ಬಿಡಿಸಿ ತಂದೊಪ್ಪಿಸುವೆನೆಂದು ಹೊರಟೇ ಬಿಟ್ಟನು.

ಹೋಗಿ ನೋಡಿದರೆ ಅಪಹರಿಸಿದವರಾರು ? ಜೀವಂಧರನ ಐನೂರು ಮಂದಿ ಬಾಲ್ಯಮಿತ್ರರು. ಗೆಳೆಯನ ದರ್ಶನಾಪೇಕ್ಷಿಗಳಾಗಿ ಈ ಹಂಚಿಕೆಯನ್ನು ಹೂಡಿದ್ದರು. ಮಿತ್ರರು ಪರಸ್ಪರ ಈ ಸಮಾಗಮದಿಂದ ಅತ್ಯಂತ ಹರ್ಷಿತರಾದರು. ಜೀವಂಧರನಿಗೆ ದೊರೆತ ಈ ಅಪೂರ್ವ ವಿಜಯವನ್ನೂ ಆತನಿಗಿದ್ದ ಈ ಶೂರಮಿತ್ರರ ಸಖ್ಯವನ್ನೂ ತಿಳಿದ ದೃಢಮಿತ್ರ ಮಹಾರಾಜರು ಅಳಿಯನಲ್ಲಿ ಮತ್ತಷ್ಟು ಗೌರವಭಾವನನ್ನು ತಾಳಿದನು. ಈ ಅರಸನಿಗಿಂತಲೂ ಅಧಿಕವಾಗಿ ಆ ಬಾಲ್ಯಸ್ನೇಹಿತರು ಪೂರ್ವಸ್ನೇಹ ಸಹಜವಾದ ಸಲುಗೆಯನ್ನು ಬಿಟ್ಟು ತನ್ನಲ್ಲಿ ವಿಶೇಷ ಗೌರವ ತೋರ್ಪಡಿಸುವುದು ಕಂಡು ಜೀವಂಧರನು ಇದೇನೆಂದು ಸಂದೇಹಕ್ಕೊಳಗಾದನು. ಕಾರಣವನ್ನು ಅವರೊಡನೆ ಏಕಾಂತದಲ್ಲಿ ವಿಚಾರಿಸಿದನು.

ಆಗ ಆ ಸ್ನೇಹಿತರಲ್ಲಿ ಪ್ರಮುಖನಾದ ಪದ್ಮಾಸ್ಯನು "ಎಲೈ ಸ್ವಾಮಿಯೇ ! ತಮ್ಮ ಅಗಲಿಕೆಯಿಂದ ನಾವೆಲ್ಲರೂ ಮೃತಪ್ರಾಯರಾಗಿದ್ದೆವು. ಆಗ ಅದಾವುದೋ ಪುಣ್ಯಾವಂಶದಿಂದ ಗಂಧರ್ವದತ್ತಾದೇವಿಯ ಅನುಗ್ರಹವಾಯಿತು. ಅದರಿಂದ ತಮ್ಮ ದರ್ಶನದಲ್ಲಿ ಆಶೆಯನ್ನಿಟ್ಟವರಾಗಿ ಅಶ್ವವ್ಯಾಪಾರಿಗಳ ವೇಷದಲ್ಲಿ ಶೋಧನೆಗೆ ಹೊರಟೆವು. ಬಹುದೂರ ಪ್ರಮಾಣ ಮಾಡಿ ದಂಡಕಾರಣ್ಯದಲ್ಲಿದ್ದ ಒಂದು ತಪೋವನಕ್ಕೆ ಬಂದು ಸೇರಿದೆವು. ಅಲ್ಲಿ

ಪುಣ್ಯಕ್ಕೆ ಮಾತೆಯಂತಿರುವ ಅಥವಾ ಪುಣ್ಯವೇ ಮಾತೆಯಾಗಿ ಅವತರಿಸಿ ದಂತಿರುವ ವ್ರತಶೀಲೆಯೋರ್ವಳನ್ನು ನೋಡಿದೆವು. ಆ ಮಹಾಮಾತೆ ಯೊಡನೆ ಅವರ ಪರಿಚಯವನ್ನು ಕೇಳಿದೆವು. ಅವರು ನಮ್ಮ ವಿಚಾರವನ್ನು ತಿಳಿಯಬಯಸಿದರು. ಅದಕ್ಕೆ ತಮ್ಮ ಹೆಸರು ಹೇಳಿ ಆ ಮಹಾಪುರುಷನ ಮಿತ್ರರೆಂದು ಹೇಳಿದೆವು. ಅಲ್ಲದೆ ತಮ್ಮನ್ನು ಕಾಷ್ಠಾಂಗಾರನು ಕೊಲ್ಲಲು ಮಾಡಿದ ಹಂಚಿಕೆಯನ್ನು ವಿವರಿಸತೊಡಗಿದೆವು. ನಮ್ಮ ಮಾತಿನ್ನೂ ಮುಗಿದಿರಲಿಲ್ಲ. ಒಡನೆ ತಮ್ಮ ವಿಷಯಕವಾದ ಅಶುಭ ಸಮಾಚಾರವನ್ನು ಪೂರ್ತಿಯಾಗಿ ಕೇಳಲಾರದೆ ಮೂರ್ಛಿತೆಯಾದಳು. ಆದರೆ ನಾವು ಒಡನೆ ಆಕೆಯನ್ನು ಉಪಚರಿಸಿ ತಮ್ಮ ನಿರಾಪದ ಸ್ಥಿತಿಯನ್ನು ಬೇಗನೆ ಅರುಹಿದೆವು. ಅದರಿಂದ ಆಕೆ ಮತ್ತೆ ಪ್ರಜ್ಞೆಯನ್ನು ಹೊಂದಿ ರೋದಿಸತೊಡಗಿದಳು ತಮ್ಮ ಉತ್ಪತ್ತ್ಯಾದಿ ಸಕಲ ವೃತ್ತಾಂತಗಳನ್ನೂ ನಮಗೆ ವಿವರಿಸಿದಳು. ಆಕಾಶ ದಿಂದ ಸುರಿಯುವ ರತ್ನವೃಷ್ಟಿಯಂತೆ ತಮ್ಮ ಮಾತೆಯ ಮುಖದಿಂದ ತಿಳಿದು ಬಂದ ಉತ್ಕರ್ಷವನ್ನು ಅರಿತು ರಾಜಪುರೀ ಪ್ರಭುತ್ವವು ತಮಗಾಯಿತೆಂದೇ ಭಾವಿಸಿದೆವು. ನಾವೂ ತಮ್ಮ ಮಹಿಮೆಯನ್ನು ಆ ಮಹಾಮಾತೆಗರುಹಿ ಸಮಾಧಾನಪಡಿಸಿ ಆ ಆಶ್ರಮವನ್ನು ಬಿಟ್ಟು ಇಲ್ಲಿಗೆ ಬಂದೆವು" ಎಂದು ಜೀವಂಧರನಿಗೆ ಆತನ ತಾಯಿಯ ವೃತ್ತಾಂತವನ್ನು ಮತ್ತು ಆತನಲ್ಲಿ ತಮಗುಂ ಟಾದ ವಿಶೇಷ ಗೌರವಕ್ಕೆ ಕಾರಣವನ್ನು ತಿಳಿಸಿದನು.

ಜೀವಂಧರನು ಸ್ಥಿತಪ್ರಜ್ಞನಾದರೂ ತಾಯಿಯ ದುರ್ದೆಶೆಗೆ ವ್ಯಸನ ಪಟ್ಟನು. ಆತನಿಗೆ ಆಕೆಯನ್ನು ನೋಡುವ ಆತುರವು ಅಧಿಕವಾಯಿತು. ಕೂಡಲೆ ಈ ವಿಷಯವನ್ನು ಬಂಧುಗಳಿಗೆ ತಿಳಿಸಿ ತಪೋವನದತ್ತ ಹೊರಡಲನುವಾದನು. ಆಗ ಬಂಧುಗಳೆಲ್ಲರೂ ಇವನೊಡನೆ ನಾವೂ ಬರುವೆವೆಂದು ಹೊರಟರು. ಅವರನ್ನೂ ಹೇಗೂ ಸಮಾಧಾನ ಪಡಿಸಿ ತಾಯ ಬಳಿಗೆ ಬಂದನು. ತಾಯನ್ನೀಕ್ಷಿಸಿ ಪ್ರೀತಿ ಪರವಶನಾದನು. ವಿಜಯಾಮಹಾದೇವಿಯೂ ಪಡೆದಂದೇ ಪರಿತ್ಯಜಿಸಿದ್ದ ಮಗನಿಗಾಗಿ ಅನುಭವಿಸುತ್ತಿದ್ದ ಕ್ಲೇಶಗಳನ್ನು ಒಮ್ಮೆಗೇ ಮರೆತಳು. ಮಾತೆಯರು ಸುತಪ್ರಾಣೆಯರಲ್ಲವೆ!

ಮಗನು ತಂದೆಯ ಪಟ್ಟವನ್ನೇರುವ ಭಾಗ್ಯವನ್ನು ನೋಡಬಯಸಿ "ಮಗನೇ! ನಿನ್ನ ತಂದೆಯ ರಾಜ್ಯಾಧಿಪತ್ಯವು ನಿನಗೆ ಬರಲೆಂದು ಹಾರೈಸುತ್ತೇನೆ. ಆದರೆ ಪ್ರಬಲ ಶತ್ರುವಿನ ಹಸ್ತಗತವಾದ ರಾಜ್ಯವು, ಸೈನ್ಯಸಂಪತ್ತೂ, ಸಹಾಯಸಂಪತ್ತೂ ಇಲ್ಲದ ನಮಗೆ ಹೇಗೆ ಸಾಧ್ಯವಾಗಬಹುದು?" ಎಂದು ಮಗನನ್ನು ಪ್ರಶ್ನಿಸಿದಳು. ಅದಕ್ಕೆ ಜೀವಂಧರನು "ಅಮ್ಮಾ! ಹೀಗೆ ದುಃಖಿಸುವುದರಿಂದ ಪ್ರಯೋಜನವೇನು? ಖಂಡಿತವಾಗಿ ನಿಮ್ಮ ಇಷ್ಟಾರ್ಥವು ಸಿದ್ಧಿಸುವುದೆಂಬುದರಲ್ಲಿ ವಿಶ್ವಾಸವಿಡಿರಿ" ಎಂದು ಧೈರ್ಯಗೊಟ್ಟನು. ವಿಜಯಾಮಹಾದೇವಿಯು ಮಗನ ಈ ದೃಢನಿರ್ಧಾರದ ಮಾತುಗಳಿಂದ ರಾಜ್ಯವು ಸುತನ ಹಸ್ತಗತವಾದಂತೆ ಭಾವಿಸಿ "ಮಗನೇ! ರಾಜ್ಯವು ಅನೇಕ ಅಪಾಯಗಳಿಗೆ ಸ್ಥಾನವಾದುದು" ಎಂದು ತಿಳಿಸಿದಳು. ಬಳಿಕ ಜೀವಂಧರನು ತಾಯಿಯೊಡನೆ ಕಾರ್ಯಸಾಧನೆಗೆ ತಕ್ಕ ಮಂತ್ರಾಲೋಚನೆಯನ್ನು ಮಾಡಿದನು.

ಆ ಮೇಲೆ ಆಕೆಯನ್ನು ಆ ತಪೋವನದಿಂದ ತನ್ನ ಸೋದರಮಾವನ ಮನೆಗೆ ಕಳುಹಿಕೊಟ್ಟು ತಾನು ಅಲ್ಲಿಂದಲೇ ರಾಜಪುರೀ ಪಟ್ಟಣಕ್ಕೆ ಹೋಗಿ ಅಲ್ಲಿರುವ ಒಂದು ಉದ್ಯಾನವನ್ನು ಪ್ರವೇಶಿಸಿದನು. ಅಲ್ಲಿ ತನ್ನ ಮಿತ್ರರನ್ನು ನಿಲ್ಲಿಸಿ ತಾನು ಪಟ್ಟಣದೊಳ ಹೊಕ್ಕು ನಾಲ್ಕೂ ಕಡೆ ಸಂಚರಿಸಿ ತನ್ನದೆಂಬ ಅಭಿಮಾನದಿಂದ ಎಲ್ಲವನ್ನೂ ನೋಡುತ್ತಿದ್ದನು. ಇವನು ಹೀಗೆ ಸಂಚರಿಸುತ್ತಿರುವಾಗ ಉಪ್ಪರಿಗೆಯಲ್ಲಿ ಆಡುತ್ತಿದ್ದ ಕನ್ನಿಕೆಯೊಬ್ಬಳ ಚೆಂಡು ಕೆಳಕ್ಕೆ ಬಿತ್ತು. ಜೀವಂಧರನು ತಲೆಯೆತ್ತಿ ಆ ಕಡೆ ನೋಡಲು ಆ ಸುಂದರಿಯಾದ ಕನ್ನಿಕೆಯು ಕಣ್ಣಿಗೆ ಬಿದ್ದಳು. ಜಿತೇಂದ್ರಿಯನಾಗಿದ್ದರೂ ಆಕೆಯನ್ನು ಕಂಡೊಡನೆ ಇವನಲ್ಲಿ ಮೋಹವಂಕುರಿಸಿತು. "ವಶಿನಾಂ ಹಿ ಮನೋವೃತ್ತಿಃ ಸ್ಥಾನ ಏವ ಹಿ ಜಾಯತೇ" ಜಿತೇಂದ್ರಿಯರಿಗೆ ಮನಸ್ಸು ಯೋಗ್ಯಸ್ಥಾನದಲ್ಲೇ ಪ್ರವರ್ತಿಸುವುದಲ್ಲದೆ ಅಯೋಗ್ಯಸ್ಥಾನದಲ್ಲಿ ಇಚ್ಛೆಯುಂಟಾಗಲಾರದಲ್ಲವೆ! ಈ ರೀತಿ ಆಕೆಯಲ್ಲಿ ವ್ಯಾಮೋಹಗೊಂಡವನಾಗಿ ಮುಂದಡಿಯಿಡದೆ ಅಲ್ಲೇ ಜಗಲಿಯೇರಿ ಕುಳಿತನು.

ಅಷ್ಟರಲ್ಲಿ ಅಲ್ಲಿಗೆ ಬಂದ ವೈಶ್ಯಶ್ರೇಷ್ಠನು ಜೀವಂಧರ ಕುಮಾರನನ್ನು ಕಂಡು ಹರ್ಷಿತನಾಗಿ "ಎಲೈ ಮಂಗಳಸ್ವಭಾವನೇ! ನಾನು ಸಾಗರದತ್ತ

ನೆಂಬ ಶ್ರೇಷ್ಠಿಯಾಗಿರುವೆನು. ಇದು ನನ್ನ ಮನೆಯು. ಈಕೆಯು ವಿಮಲಾಭಿಧಾನವುಳ್ಳ ನನ್ನ ಪುತ್ರಿಯಾಗಿರುವಳು. ಈಗಾಗಲೇ ವಿವಾಹಯೋಗ್ಯ ವಯಸ್ಸಿನವಳಾಗಿರುವಳು. ಇವಳ ಜನನಕಾಲದಲ್ಲಿ ಜೋಯಿಸರು "ಯಾವ ಪುರುಷನ ಆಗಮನದಿಂದ ಬಹುಕಾಲ ಮಾರಾಟವಾಗದೆ ಉಳಿದ ರತ್ನರಾಶಿಯು ಮಾರಿಹೋಗುವುದೋ ಆತನೇ ಈ ಕನ್ನಿಕೆಗೆ ತಕ್ಕ ವರನಾಗುವನು" ಎಂದು ಭವಿಷ್ಯ ನುಡಿದಿರುವರು. ತಮ್ಮ ಆಗಮನದಿಂದ ಅವರ ಆ ಭವಿಷ್ಯವಾಣಿಯು ಸತ್ಯವಾಯಿತು. ಆದಕಾರಣ ಮಹಾಭಾಗ್ಯಶಾಲಿಯಾದ ಈ ವಿಮಲೆಯೆಂಬ ನನ್ನ ಪುತ್ರಿಯನ್ನು ಪರಿಗ್ರಹಿಸುವ ಕೃಪೆಮಾಡಬೇಕು" ಎಂದು ಪ್ರಾರ್ಥಿಸಿಕೊಂಡನು. ಜೀವಂಧರನು ಶ್ರೇಷ್ಠಿಯ ಒತ್ತಾಯದ ಪ್ರಾರ್ಥನೆಯನ್ನು ಮನ್ನಿಸಿ ವಿಮಲೆಯನ್ನು ಅಗ್ನಿಸಾಕ್ಷಿಯಾಗಿ ಪರಿಗ್ರಹಿಸಿದನು.

*+++++++++++*

## ಸುರಮಂಜರೀ ವಿವಾಹ

ಜೀವಂಧರನು ರಾಜಪುರೀ ಪಟ್ಟಣದಲ್ಲೇ ವಿಮಲೆಯೊಡನೆ ಕೆಲವು ದಿನ ವಿದ್ದು ತನ್ನ ಗೆಳೆಯರ ಬಳಿಗೆ ಬಂದನು. ಮದುವಣಿಗನಾಗಿ ಬಂದ ಮಿತ್ರನನ್ನು ನೋಡಿ ಆ ಗೆಳೆಯರು ಬಹಳವಾಗಿ ಹೊಗಳಿದರು. ಆಗ ಅವರಲ್ಲಿ ಪರಿಹಾಸಪಟುವಾದ ಬುದ್ಧಿಷೇಣನೆಂಬ ಗೆಳೆಯನು ಜೀವಂಧರನೊಡನೆ "ಗೆಳೆಯನೇ! ಯಾರೂ ಒಲ್ಲದೆ ಬಿಟ್ಟಿರುವ ಕನ್ನಿಕೆಯರೆಲ್ಲ ನಿನ್ನ ಪಾಲಿಗೇ ಎಂದು ತೋರುತ್ತದೆ. ಆದರೆ ಯಾರನ್ನು ಪಡೆದರೂ ನಿನ್ನಿಂದ ಆ ಸುರಮಂಜರಿಯನ್ನು ಮಾತ್ರ ಪಡೆಯಲಿಕ್ಕಾಗಲಿಲ್ಲ. ನೀನು ಅವಳನ್ನು ಪಡೆದೆಯಾದರೆ ಆಗ ನಿನ್ನನ್ನು ಭಾಗ್ಯಶಾಲಿಯೆನ್ನಬಹುದು." ಸಾಕೂತವಾಗಿ ಪರಿಹಾಸ ಮಾಡಿದನು.

ಇದರಿಂದ ಲಜ್ಜಿತನಾದ ಜೀವಂಧರನಿಗೆ ಆಕೆಯನ್ನು ಸಾಧಿಸಿಯೇ ಬಿಡಬೇಕೆಂಬ ಹಠವುಂಟಾಯಿತು. ಒಡನೆ ಈ ಮೊದಲು ತನ್ನಿಂದ

ಉಪಕೃತನಾಗಿ ದೇವತ್ವವನ್ನು ಪಡೆದು ಪ್ರತ್ಯುಪಕಾರಕ್ಕೆ ಸಿದ್ಧನಿದ್ದ ಸುದರ್ಶನ ಯಕ್ಷನನ್ನು ನೆನೆದನು. ಅವನು ಬಂದು ಜೀವಂಧರನಿಗೆ ಕಾಮರೂಪದಾಯಕವಾದ ಮಂತ್ರವನ್ನು ಉಪದೇಶಿಸಿದನು. ಅದರ ಬಲದಿಂದ ಸರ್ವಜನ ದಯನೀಯವಾದ, ನೋಡಿದ ಮಾತ್ರಕ್ಕೆ ದೇಹಭ್ರಾಂತಿಯಳಿಸಿ ವೈರಾಗ್ಯಭಾವವನ್ನುತ್ಪನ್ನಮಾಡಬಹುದಾದ ವೃದ್ಧ ಬ್ರಾಹ್ಮಣರೂಪವನ್ನು ತಾಳಿದನು. ಪಟ್ಟಣದಲ್ಲಿ ಅಲ್ಲಿ ಇಲ್ಲಿ ಸಂಚರಿಸುತ್ತಾ ವಿವೇಕಿಗಳಿಗೆ ವೈರಾಗ್ಯಹೇತುವಾದ ಶರೀರದ ಹೇಯತ್ವವನ್ನು ಪ್ರಕಟಿಸುತ್ತಾ ಮೂಢರ ಬಾಲರ ಪರಿಹಾಸಕ್ಕೊಳಗಾಗುತ್ತಾ ಸುರಮಂಜರಿಯ ಮನೆ ಬಾಗಲಿಗೆ ಬಂದನು.

ದ್ವಾರಪಾಲಿಕೆಯರು ಈತನನ್ನು ತಡೆದು ಬಂದುದರ ಕಾರಣವನ್ನು ಕೇಳಿದರು. ಅದಕ್ಕೆ ಜೀವಂಧರನು "ಸುರಮಂಜರಿಯು ಪ್ರಾಪ್ತವಯಸ್ಕಳಾಗಿರುವಳೆಂದು ಕೇಳಿದೆ. ಕನ್ಯಾದಾನವು ನಡೆಯುವುದಾದರೆ ಅದಕ್ಕೆ ನಾನೇ ಕೈಯೊಡ್ಡುವೆನೆಂದು ಬಂದಿರುವೆನು" ಎಂದು ನುಡಿದನು. ಈ ಮಾತಿಗೆ ಆ ದ್ವಾರಪಾಲಿಕೆಯರು ನಕ್ಕರು. ವಿನೋದವನ್ನೊಮ್ಮೆ ನೋಡೋಣವೆಂದು ತಡೆಯದೆ ಒಳಬಿಟ್ಟರು. ಇವನು ಸುರಮಂಜರಿಯ ಮನೆಯನ್ನು ಪ್ರವೇಶಿಸಿದನು. ಆದರೆ ಈತನನ್ನು ಒಳಗೆ ಬಿಟ್ಟುದೇಕೆಂದು ಒಡತಿಯು ಗದರಿಸಿ ಬಿಡುವಳೋ ಎಂದು ಮತ್ತೆ ಬೆದರಿದ ದ್ವಾರಪಾಲಿಕೆಯರು ಮುಂದಾಗಿ ಸುರಮಂಜರಿಯ ಬಳಿಗೆ ಓಡಿ ಬಂದು ಭಯಭರಿತ ಭಕ್ತಿಯಿಂದ ಈ ಬ್ರಾಹ್ಮಣನ ವೃತ್ತಾಂತವನ್ನು ಪುರುಷದ್ವೇಷಿಯಾದ ಈಕೆಗೆ ಬಿನ್ನವಿಸಿಕೊಂಡರು. ಅಷ್ಟರಲ್ಲಿ ಈತನೂ ಅಲ್ಲಿಗೆ ಬಂದು ಮುಟ್ಟಿದನು ಸುರಮಂಜರಿಯು ಬ್ರಾಹ್ಮಣನನ್ನು ನೋಡಿದಳು. ಹಸಿದವನಂತೆ ತೋರಿದುದರಿಂದ ಮೊದಲು ಇವನಿಗೆ ಊಟವಿಕ್ಕಿರೆಂದು ಸೇವಕಿಯರಿಗಾಜ್ಞಾಪಿಸಿದಳು ವೃದ್ಧ ಬ್ರಾಹ್ಮಣ ವೇಷಧಾರಿಯಾದ ಜೀವಂಧರನು ಸೇವಕಿಯರಿಕ್ಕಿದುದನ್ನು ಹೊಟ್ಟೆ ತುಂಬ ಉಂಡು ವಯೋಧರ್ಮಕ್ಕನುಗುಣವಾದ ಆಯಾಸದಿಂದ ಮಂಚದಲ್ಲಿ ಮಲಗಿದನು.

ಸ್ವಲ್ಪ ಹೊತ್ತಿನ ಮೇಲೆ ಸಂಗೀತ ಶಾಸ್ತ್ರವಿಶಾರದನಾದ ಇವನು ಜಗನ್ಮೋಹಕವಾದ ಗಾನವನ್ನು ಹಾಡತೊಡಗಿದನು. ಇದನ್ನು ಕೇಳಿದುದೇ ತಡ ಸುರಮಂಜರಿಯು, ಇವನು ಸಾಮಾನ್ಯನಲ್ಲ. ಇವನಿಗೆ ಇದೇ

ಪ್ರಕಾರ ಅನೇಕ ಇತರ ವಿದ್ಯೆಗಳಲ್ಲಿಯೂ ಪರಿಚಯವಿರಬಹುದೆಂದು ಊಹಿಸಿದಳು. ಸ್ವಕಾರ್ಯವೇನಾದರೂ ಈತನಿಂದ ಸಿದ್ಧಿಸುವುದೋ ನೋಡಬೇಕೆಂದು "ಪೂಜ್ಯರೇ! ತಮಗೆ ಈ ಗಾನವಿದ್ಯೆಯಲ್ಲಿ ಪಾಂಡಿತ್ಯವಿರುವಂತೆ ಇತರ ವಿಷಯಗಳಲ್ಲಿಯೂ ಇರುವುದೇ? ಇದ್ದರೆ ತನಗನುರೂಪನಾದ ವರನನ್ನು ಪಡೆಯುವ ಉಪಾಯವಾವುದೆಂದು ತಿಳಿಸುವ ಕೃಪೆದೋರಬೇಕು" ಎಂದು ಕೇಳಿಕೊಂಡಳು. ವೃದ್ಧವೇಷಧರನಾದ ಜೀವಂಧರನು ತನಗೆ ಸರ್ವ ವಿಷಯಗಳ ಪರಿಚಯವಿರುವುದೆಂದೂ ನಿನ್ನ ಇಷ್ಟವರ ಪ್ರಾಪ್ತಿಗೆ ಕಾಮದೇವಾರ್ಚನೆಯೇ ಉಪಾಯವೆಂದೂ ಸೂಚಿಸಿದನು ಬಳಿಕ ಸುರಮಂಜರಿಯ ಪ್ರಾರ್ಥನೆಯಂತೆ ಆಕೆಯನ್ನೊಡಗೊಂಡು ಕಾಮದೇವನನ್ನು ಪ್ರಾರ್ಥಿಸಿಕೊಳ್ಳುವಂತೆ ಸೂಚಿಸಿದನು.

ಆಕೆಯು ತಾನು ಮೆಚ್ಚಿದ ವರನು ಜೀವಂಧರನು. ಅವನೇ ತನಗೆ ಪತಿಯಾಗಲೆಂದು ಕಾಮದೇವನನ್ನು ಬಹುವಿಧವಾಗಿ ಪ್ರಾರ್ಥಿಸಿಕೊಂಡಳು. ಆಗ ವಿಗ್ರಹದ ಮರೆಯಲ್ಲಿ ಮೊದಲೇ ಅಡಗಿ ನಿಂತಿದ್ದ ಜೀವಂಧರನ ಮಿತ್ರನಾದ ಬುದ್ಧಿಷೇಣನು ಕಾಮದೇವನೇ ನುಡಿಯುವಂತೆ "ನಿನಗೆ ಇಚ್ಛಿತವರನು ಲಭಿಸಿರುವನು" ಎಂದು ನುಡಿದನು. ಇದು ಕಾಮದೇವದತ್ತ ವರಪ್ರಸಾದವೆಂದೇ ಸುರಮಂಜರಿಯು ನಂಬಿದಳು. ತಲೆಯೆತ್ತಿ ನೋಡಿದಳು ಮುಂದೆ ಆ ಕಪಟ ಬ್ರಾಹ್ಮಣನು ಮಾಯವಾಗಿ ಜೀವಂಧರನೇ ನಿಂತಿರುವುದನ್ನು ಕಂಡಳು. ಕಂಡು ನಾಚಿದಳು. ಇವನು ಆಕೆಯ ಲಜ್ಜೆಯನ್ನು ಹೋಗಲಾಡಿಸಿ ಹರುಷಗೊಳ್ಳುವಂತೆ ಮಾಡಿದನು. ಈ ಸಂಗತಿ ಎಲ್ಲವೂ ಸುರಮಂಜರಿಯ ತಾಯ್ತಂದೆಗಳಾದ ಸುಮತಿ ಕುಬೇರದತ್ತರಿಗೆ ತಿಳಿಯಿತು. ಒಡನೆ ಅತ್ಯಂತ ಹರ್ಷಿತರಾಗಿ ಮಗಳನ್ನು ಜೀವಂಧರನಿಗೆ ಒಪ್ಪಿಸಿದರು. ಸುರಮಂಜರಿಯು ಜೀವಂಧರನ ಸತಿಯಾದಳು.

++ ++ ++ ++ ++ ++ ++

## ರಾಜ್ಯವಧೂ ಪಾಣಿಗ್ರಹಣ

ಸುರಮಂಜರಿಯ ವಿವಾಹಾನಂತರ ಜೀವಂಧರನು ಆಕೆಯನ್ನು ಸಂತೈಸಿ ಅವಳ ಮನೆಯಲ್ಲೇ ನಿಲ್ಲಿಸಿ ತಾನು ಸ್ನೇಹಿತರ ಬಳಿಗೆ ಬಂದನು. ಇವನ ಸಾಹಸಕ್ಕೆ ಗೆಳೆಯರು ಅತ್ಯಾಶ್ಚರ್ಯ ಪಟ್ಟರು. ಅವರನ್ನು ಕೂಡಿಕೊಂಡು ಜೀವಂಧರನು ಸಾಕು ತಾಯ್ತಂದೆಯರಾದ ಸುನಂದಾ ಗಂಧೋತ್ಕಟ ಶ್ರೇಷ್ಠಿ ಯರ ಬಳಿಗೆ ಬಂದನು. ಇವನನ್ನು ಕಂಡು ಅವರು ಬಹಳವಾಗಿ ಸಂತೋಷ ಪಟ್ಟರು. "ಕನ್ಯಾನಂದಕರೋ ನಸ್ಯಾತ್ಕೃತಾನ್ಮಾ ಸ್ಯಾದಪಾಗತ:" ಮೃತ್ಯು ಮುಖದಿಂದ ಬದುಕಿ ಬಂದವನನ್ನು ಕಂಡರೆ ಯಾರಿಗೆ ತಾನೆ ಹರ್ಷವಾಗದು. ಇವರಂತೆ ಗಂಧರ್ವದತ್ತೆಗೂ ಗುಣಮಾಲೆಗೂ ಪತಿವಿರಹದಿಂದುಂಟಾದ ಮನೋ ವ್ಯಥೆಯು ಮಾಯವಾಯಿತು.

ಜೀವಂಧರನು ತನ್ನ ಉದ್ದಿಷ್ಟಕಾರ್ಯಸಾಧನೆಗಾಗಿ ಸಾಕುತಂದೆಯಾದ ಗಂಧೋತ್ಕಟ ಶ್ರೇಷ್ಠಿಯೊಡನೆ ಆಲೋಚಿಸಿದನು. ಬಳಿಕ ಅವನ ಆಶೀರ್ವಾದ ವನ್ನು ಪಡೆದು ವಿದೇಹರಾಜ್ಯದ ಧರಣೀತಿಲಕವೆಂಬ ಹೆಸರಿನ ಪ್ರಸಿದ್ಧವಾದ ಪಟ್ಟಣಕ್ಕೆ ಬಂದನು. ಅಲ್ಲಿ ಅವನ ಸೋದರಮಾವನಾದ ಗೋವಿಂದರಾಜನು ಅರಸನಾಗಿದ್ದನು. ಜಗದ್ವಿಖ್ಯಾತನಾದ ಅಳಿಯನ ಬರವನ್ನು ತಿಳಿದು ಗೋವಿಂದ ರಾಜನು ಅವನನ್ನು ಪ್ರೀತಿಯಿಂದ ಸ್ವಾಗತಿಸಿ ಸತ್ಕರಿಸಿದನು. ಇವನು ಈ ಮೊದಲೇ ಅಳಿಯನಾದ ಜೀವಂಧರನಿಗೆ ಶತ್ರುಹಸ್ತಗತವಾದ ಆತನ ರಾಜ್ಯ ವನ್ನು ಸಾಧಿಸಿಕೊಟ್ಟು ರಾಜಪುರೀ ಪಟ್ಟಣದಲ್ಲಿ ಪಟ್ಟಾಭಿಷೇಕವನ್ನು ಮಾಡ ಬೇಕೆಂಬಾಶೆಯುಳ್ಳವನಾಗಿದ್ದನು. "ಸ್ವಯಂ ಪರಿಣತೋ ದಂತೀ ಪ್ರೇರಿತೋ ನ್ಯೇನ ಕಿಂ ಪುನ:" ಎಂಬಂತೆ ಈಗ ಈ ಪ್ರಖ್ಯಾತನಾದ ಜೀವಂಧರನ ನೆರವೂ ದೊರೆಯಿತೆಂದ ಮೇಲೆ ಕೇಳುವುದೇನು? ಪ್ರೇರಿತ ಮದಕರಿಯಂತೆ ಕಾರ್ಯಕ್ಕೆ ಮುನ್ನುಗ್ಗಿದನು. ಪದ್ಧತಿಯಂತೆ ಮಂತ್ರಿಗಳನ್ನು ಕರೆಯಿಸಿ ಮಂತ್ರಾಲೋಚನೆ ಯನ್ನು ನಡೆಯಿಸಿದನು. ಜೀವಂಧರನ ಹಕ್ಕಿನ ಪಟ್ಟವನ್ನು ಆತನಿಗೆ ಬಿಟ್ಟು ಕೊಡಬೇಕಾಗಿ ಮಂತ್ರಿಗಳ ಮೂಲಕ ಕಾಷ್ಠಾಂಗಾರನಿಗೆ ಹೇಳಿ ಕಳುಹಿಸಿದನು.

ಇವಕ್ಕೆ ಉತ್ತರವಾಗಿ ಆ ಕಾಷ್ಠಾಂಗಾರನು "ಮದಿಸಿದ ಆನೆಯು ಸತ್ಯಂಧರ ಮಹಾರಾಜನನ್ನು ಸಂಹರಿಸಿತು. ಪೂರ್ವಭವದ ಪಾಪವಶದಿಂದ ಕಾಷ್ಠಾಂಗಾರನು ಸ್ವಾಮಿದ್ರೋಹ ಮಾಡಿದನೆಂಬ ಅಪಖ್ಯಾತಿಗೆ ನಾನು ಒಳಗಾದೆನು. ಇದರ ನಿಜಸ್ಥಿತಿಯನ್ನು ಕಂಡವರು ಬಲ್ಲರೇ ಹೊರತು ಕೇಳಿದವರೆಂತು ಬಲ್ಲರು? ತಾವು ಇಲ್ಲಿಗೆ ದಯಮಾಡಿದುದೇ ಆದರೆ ನಾನು ಈ ದು:ಖಕರವಾದ ಅಪಖ್ಯಾತಿಯಿಂದ ಮುಕ್ತನಾಗುತ್ತಿದ್ದೆನು" ಎಂದು ವಂಚನೆಯ ಮಾತನ್ನು ಹೇಳಿಕಳುಹಿಸಿದನು.

ಇದು ಗೋವಿಂದರಾಜನನ್ನು ವಂಚಿಸಲು ತೋರಿದ ಕುಟಿಲ ವಿನಯವಾಗಿದ್ದಿತು. "ಅಸತಾಂ ಹಿ ವಿನಮ್ರತ್ವಂ ಧನುಷಾಮಿವ ಭೀಷಣಂ" ದುರ್ಜನರ ನಮ್ರತೆಯು ಧನುಸ್ಸಿನಂತೆ ಭಯಂಕರವೇ ಹೊರತು ನಂಬಿಕೆಗರ್ಹವಾದುದಲ್ಲವಷ್ಟೆ! ಗೋವಿಂದರಾಜನು ವಿವೇಕಿಯಾದುದರಿಂದ ಇವನ ಕುಟಿಲ ವಿನಯವನ್ನು ಅರ್ಥ ಮಾಡಿಕೊಂಡನು. "ಶಠಂ ಪ್ರತಿಶಾಠ್ಯಂ" ಎಂಬಂತೆ ಕುಟಿಲನನ್ನು ಕುಟಿಲತೆಯಿಂದಲೇ ಕೆಡಹಬೇಕೆಂದು ಬಗೆದು ಆತನ ಆಹ್ವಾನವನ್ನೇ ನೆಪವಾಗಿಟ್ಟುಕೊಂಡು ಹೋಗಿ ಸಮಯ ನೋಡಿ ಕಾರ್ಯ ಸಾಧಿಸಬೇಕೆಂದು ನಿಶ್ಚಯಿಸಿದನು "ಬಕಾಯಂತೇ ಹಿ ಜಿಷ್ಣವ:" ವಿಜಿಗೀಷುಗಳ ನೀತಿಯು ಬಹುಧಾ ಬಕಪಕ್ಷಿಯ ಕಾರ್ಯದಂತಿರುವುದಿಲ್ಲವೆ? ತನಗೆ ಕಾಷ್ಠಾಂಗಾರನೊಡನೆ ಮಿತ್ರತ್ವವಾಗಿದೆಯೆಂದು ಡಂಗುರ ಹೊಡೆಸಿದನು. ಚತುರಂಗ ಸೇನೆಯು ಪ್ರಯಾಣ ಸನ್ನದ್ಧವಾಗಲೆಂದು ಸೇನಾಪತಿಗೆ ಅಪ್ಪಣೆಗೊಟ್ಟನು. ಸತ್ಪಾತ್ರದಾನ, ಜಿನಪೂಜೆ ಮೊದಲಾದ ಮಂಗಳಕಾರ್ಯಗಳನ್ನು ನೆರವೇರಿಸಿ ಸುಮುಹೂರ್ತದಲ್ಲಿ ರಾಜಪುರೀ ಪಟ್ಟಣಕ್ಕೆ ಹೊರಟನು. ಕೇವಲ ಪ್ರಯಾಣಗಳಿಂದ ರಾಜಪುರೀ ಪಟ್ಟಣವನ್ನು ತಲಪಿ, ಪಟ್ಟಣದ ಸಮೀಪದಲ್ಲಿ ಬೀಡು ಬಿಟ್ಟನು.

ಕಪಟಿಯಾದ ಕಾಷ್ಠಾಂಗಾರನು ಇದನ್ನು ತಿಳಿದು ಅತಿ ಸಭ್ಯನಂತೆ ಗೋವಿಂದರಾಜನಿಗೆ ಕೈಗಾಣಿಕೆಗಳ ಮೇಲ್ ಕೈಗಾಣಿಕೆಗಳನ್ನು ಕಳುಹಿಸಿದನು. ಪ್ರತಿಯಾಗಿ ಗೋವಿಂದರಾಜನಿಂದಲೂ ಕೈಗಾಣಿಕೆಗಳು ಹೋದುವು. ಬಳಿಕ ಗೋವಿಂದರಾಜನು ಒಂದು ವರಾಹ ಯಂತ್ರವನ್ನು ನಿರ್ಮಿಸಿಟ್ಟು ಅದನ್ನು

ಭೇದಿಸಿದವನಿಗೆ ತನ್ನ ಮಗಳನ್ನು ಒಪ್ಪಿಸುವೆನೆಂದು ಸಾರಿಸಿದನು. ಕನ್ಯಾಸ್ವಯಂವರ ವಾರ್ತೆಯು ಎಲ್ಲೆಡೆಯಲ್ಲಿಯೂ ಪ್ರಸಿದ್ಧವಾಯಿತು. ಧನು ವಿದ್ಯಾ ಪಂಡಿತರಾದ ಬ್ರಹ್ಮ, ಕ್ಷತ್ರಿಯ, ವೈಶ್ಯಕುಲದ ಶೂರರರೆಲ್ಲರೂ ರಾಜ ಪುರೀ ಪಟ್ಟಣಕ್ಕೆ ಬಂದು ಸೇರಿದರು. ಆದರೆ ಚಂದ್ರಕವೆಂಬ ಯಂತ್ರದಲ್ಲಿ ಪಣವಾಗಿಟ್ಟ ವರಾಹಗಳನ್ನು ಭೇದಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ. ಕೊನೆಗೆ ಜೀವಂಧರನು ಮುಂದಕ್ಕೆ ಬಂದನು. ಅತಿವೇಗದಿಂದ ಸುತ್ತಿ ಯಂತ್ರ ವನ್ನೇರಿ ಅವರ ಮೇಲಿನ ವರಾಹಗಳನ್ನು ಕತ್ತರಿಸಿದನು. ಗೋವಿಂದರಾಜನು ಸಭಿಕರನ್ನುದ್ದೇಶಿಸಿ “ಇವನು ಸತ್ಯಂಧರ ಮಹಾರಾಜನ ಪುತ್ರನೆಂದು ಮಹಾತ್ಮರು ಹೇಳುವ ಮಾತನ್ನು ಈಗಲಾದರೂ ನಂಬಬಹುದಲ್ಲವೆ ?” ಎಂದು ಕೇಳಿದನು. ಸಭೆಯಲ್ಲಿದ್ದವರೆಲ್ಲರೂ ನಮ್ಮ ಊಹೆಯೂ ಅದೇ ಇರುವುದೆಂದು ಸಮ್ಮತಿಗೊಟ್ಟರು.

ಕಾಷ್ಠಾಂಗಾರನು ಜೀವಂಧರನನ್ನು ನೋಡಿದನು. ಒಮ್ಮೆಗೆಯೇ ಕುಗ್ಗಿ ಹೋದನು. ಮೃತ ಪ್ರಾಯನಾದನು. ಚಿಂತೆಗೊಳಗಾದನು. ಇನ್ನು ರಾಜ್ಯಲಕ್ಷ್ಮಿಯು ಈತನಲ್ಲಲ್ಲದೆ ತನ್ನಲ್ಲಿ ನಿಲ್ಲಲಾರಳೆಂದು ಒಳಗೊಳಗೇ ಖಿನ್ನ ನಾದನು. ತನ್ನಲ್ಲೇ “ಈ ಶತ್ರುವನ್ನು ಸಂಹರಿಸೆಂದು ಹಿಂದೆ ನನ್ನ ಭಾವ ಮೈದುನನಾದ ಮದನನ ವಶಕ್ಕೆ ಒಪ್ಪಿಸಿದ್ದೆನಲ್ಲವೆ! ಅವನೇಕೆ ಕೊಲ್ಲದೆ ಬಿಟ್ಟನೋ ತಿಳಿಯದಲ್ಲ. “ಆತ್ಮನೀನೇ ವಿನಾತ್ಮಾನ ಮಂಜಸಾ ನ ಹಿ ಕಶ್ಚನ” ತನ್ನ ಕೆಲಸವನ್ನು ತಾನೇ ಮಾಡಬೇಕಲ್ಲದೆ ಇತರರನ್ನು ನಂಬಕೂಡದೆಂಬ ನ್ಯಾಯವು ಸತ್ಯವಾಯಿತು ನಾನೇಕೆ ಈ ಗೋವಿಂದರಾಜನನ್ನು ಆಹ್ವಾನಿ ಸಿದೆನೋ ಎಂದು ಪಶ್ಚಾತ್ತಾಪ ಪಟ್ಟನು “ಮರುತ್ಸಖೇ ಮರುಮ್ನೋತೇ ಮಹ್ಯಾಂ ಕಿಂಪಾ ನ ದಹ್ಯತೇ” ಎನ್ನುವಂತೆ ಸಮಸ್ತ ಸಾಮಂತರೊಡನೆಯೂ ಸರ್ವ ಸೈನ್ಯಗಳೊಡನೆಯೂ ಮಹಾಶೂರನಾದ ಜೀವಂಧರ ಕುಮಾರನೊಡ ನೆಯೂ ಕೂಡಿಕೊಂಡು ಅತ್ಯಂತ ಗರ್ವಿತನಾಗಿರುವ ಈ ಗೋವಿಂದರಾಜನು ನಮ್ಮನ್ನು ಇನ್ನು ಏನು ಮಾಡಬೇಕೆಂದಿರುವನೋ ? ಈತನನ್ನು ಗೆಲ್ಲುವ ಬಗೆಯಾವನೂ ಯಾವುದು?” ಎಂದು ತನ್ನಲ್ಲಿ ತಾನೆ ಚಿಂತಿಸಿದನು. ಚಿಂತಾ ಕ್ರಾಂತನಾಗಿರುವ ಕಾಷ್ಠಾಂಗಾರನನ್ನು ಜೀವಂಧರನ ಸ್ನೇಹಿತರು ಅಣಕಿಸಿ ಕೆಣಕತೊಡಗಿದರು.

ಈ ತಿರಸ್ಕಾರವನ್ನು ಸಹಿಸದೆ ಕಾಷ್ಠಾಂಗಾರನು ಬಹುಕಾಲದ ಹಗೆಯಾದ ಜೀವಂಧರನೊಡನೆ ಅದುದಾಗಲೆಂದು ಹೋರಾಟಕ್ಕೆ ನಿಂತನು. ಈರ್ವರೂ ಯುದ್ಧಸನ್ನದ್ಧರಾಗಲು ನೆರೆದ ರಾಜರಲ್ಲಿ ಕೆಲವರು ಜೀವಂಧರನ ಪಕ್ಷವನ್ನೂ ಇನ್ನು ಕೆಲವರು ಕಾಷ್ಠಾಂಗಾರನ ಪಕ್ಷವನ್ನೂ ಸೇರಿಕೊಂಡರು. ಎರಡೂ ಪಕ್ಷಗಳೊಳಗೆ ಭಯಂಕರ ಕಾಳಗವಾಯಿತು ಈ ಹೋರಾಟದಲ್ಲಿ ದುಷ್ಟನಾದ ಕಾಷ್ಠಾಂಗಾರನು ಜೀವಂಧರನಿಂದ ಸಂಹೃತನಾದನು. ಶತ್ರು ಹತನಾದೊಡನೆ ಮತ್ತೆ ಆತನ ಪಕ್ಷಕ್ಕೆ ಸೇರಿದ ಇತರರನ್ನು ಸಂಹರಿಸುವ ಕಾರ್ಯಕ್ಕೆ ಮನಸ್ಸು ಮಾಡದೆ ಹಿಂಸಾಕಾರ್ಯದಿಂದ ವಿಮುಖನಾದನು. ಗೋವಿಂದರಾಜನು ತನ್ನ ತಂಗಿಯು ವೀರಜನನಿಯಾದಳು. ಮಗಳು ವೀರಪತ್ನಿಯಾದಳು ಎಂದು ಆನಂದಿತನಾದನು. ಎರಡೂ ಪಕ್ಷದ ಸಾಮಂತ ರಾಜರೆಲ್ಲರೂ ಒಟ್ಟಾಗಿ ಜೀವಂಧರನ ಸಾರ್ವಭೌಮತ್ವವನ್ನು ಒಪ್ಪಿ ಆತನಿಗೆ ವಿಧೇಯರಾದರು. ಜಿನ ಚೈತ್ಯಾಲಯದಲ್ಲಿ ಜೀವಂಧರನ ಪಟ್ಟಾಭಿಷೇಕೋತ್ಸವಕ್ಕೆ ಎಲ್ಲ ಸಿದ್ಧತೆಗಳೂ ನಡೆದುವು. ಆ ಸಮಯಕ್ಕೆ ಸರಿಯಾಗಿ ಜೀವಂಧರನಿಂದ ಉಪಕೃತನಾದ ಸುದರ್ಶನ ಯಕ್ಷನೂ ಅಲ್ಲಿಗೆ ಬಂದನು. ಪಟ್ಟಾಭಿಷೇಕೋತ್ಸವವು ವೈಭವದಿಂದ ಜರಗಿತು. ಗೋವಿಂದರಾಜನು ಮಗಳಾದ ಲಕ್ಷ್ಮಣಾದೇವಿಯನ್ನು ಜೀವಂಧರನಿಗೆ ಧಾರೆಯೆರೆದಿತ್ತನು. ಬಳಿಕ ಸುದರ್ಶನ ಯಕ್ಷರಾದಿಯಾಗಿ ಸರ್ವರೂ ಜೀವಂಧರನ ಅಪ್ಪಣೆ ಪಡೆದು ತಂತಮ್ಮ ಊರಿಗೆ ಮರಳಿದರು.

ಜೀವಂಧರನ ಜೀವನವೆಂದರೆ ಅತಿ ವಿಚಿತ್ರವಾದುದು. ಅರಸುಮಗನಾಗುವ ಭಾಗ್ಯವಿದ್ದವನಿಗೆ ಸ್ಮಶಾನದಲ್ಲಿ ಜನ್ಮವಾಯಿತು. ಚಕ್ರವರ್ತಿಯ ಮಗನಾಗುವನು ಗತಿಯಿಲ್ಲದೆ ಅಲೆದು ಪರಿಪುಷ್ಟನಾಗಿ ಬೆಳೆಯಬೇಕಾಯಿತು. ರಾಜ್ಯವನ್ನು ಕಳಕೊಂಡು ನಿಸ್ಸಹಾಯಕನಾದವನು ಪ್ರಬಲ ಶತ್ರುವಿನ ಹಸ್ತಗತವಾದ ರಾಜ್ಯವನ್ನು ಅನಾಯಾಸವಾಗಿ ಪಡೆದನು. ಇದನ್ನು ಕಂಡು "ಅಹೋಕರ್ಮವಿಚಿತ್ರತಾ" ಎನ್ನುತ್ತ ಸತ್ಯಂಧರ ಮಹಾರಾಜನ ಸುತನ ಸೌಭಾಗ್ಯಕ್ಕೆ ಲೋಕವೇ ಬೆರಗಾಯಿತು. ಜೀವಂಧರನ ಉನ್ನತಿಯನ್ನೂ ಕಾಷ್ಠಾಂಗಾರನ ಅವನತಿಯನ್ನೂ ಕಂಡ ಸಜ್ಜನರು "ಪುಣ್ಯ

ಪಾಪಾದೃತೇ ನಾನ್ಯತ್ಸುಖೇ ದುಃಖೇಚ ಕಾರಣಂ ” ಸುಖದುಃಖಗಳಿಗೆ ಪುಣ್ಯ ಪಾಪಗಳೇ ಕಾರಣಗಳಲ್ಲದೆ ಬೇರೆ ಯಾವುದೂ ಅಲ್ಲ ಎಂದೂ “ ಭಾವ್ಯವಶ್ಯಂ ಭವೇದೇವ ನಹಿ ಕೇನಾಪಿರುದ್ಧ್ಯತೇ ” ಆಗುವುದು ಆಗಿಯೇ ತೀರುತ್ತದೆ. ಅದನ್ನು ಯಾರಿಂದಲೂ ತಡೆಯಕ್ಕಾಲಿಗುವುದಿಲ್ಲ ಎಂದೂ ಆಡಿಕೊಳ್ಳುತ್ತ ತಮತಮಗೆ ಸಂತುಷ್ಟರಾದರು. ಜೀವಂಧರು ಇವರೆಲ್ಲರ ಹರಕೆಯೊಡನೆ ನೂತನ ವಧುವಾದ ಲಕ್ಷ್ಮಣಾದೇವಿಯನ್ನೂ ರಾಜ್ಯಲಕ್ಷ್ಮಿಯನ್ನೂ ಸ್ವೀಕರಿಸಿ ಪಟ್ಟವೇರಿ ನೂತನ ರಾಜ್ಯಭಾರಕ್ಕಾರಂಭಿಸಿದನು.

++++++++++++++++

## ಜೀವಂಧರನ ರಾಜ್ಯಭಾರ

ರಾಜ್ಯದಾಳಿಕೆಯ ಭಾರವನ್ನು ಹೊತ್ತ ಜೀವಂಧರ ಮಹಾರಾಜನು ಹಗೆಯಾದ ಕಾಷ್ಠಾಂಗಾರನ ಮರಣದಿಂದ ಅನಾಥವಾಗಿಯೂ ದಯನೀಯವಾಗಿಯೂ ಇರುವ ಆತನ ಕುಟುಂಬವು ಆ ಪಟ್ಟಣದಲ್ಲೇ ನಿರ್ಭೀತವಾಗಿ ಸುಖದಿಂದ ಬಾಳುವಂತೆ ಮಾಡಿದನು. ತಮ್ಮನಾದ ನಂದಾಢ್ಯನಿಗೆ ಯುವ ರಾಜ್ಯಾಧಿಕಾರವನ್ನಿತ್ತನು. ಗಂಧೋತ್ಕಟ ಶ್ರೇಷ್ಠಿಯನ್ನು ವೃದ್ಧ ಕ್ಷತ್ರಿಯೋಚಿತಸ್ಥಾನದಲ್ಲಿಯೂ ವಿಜಯಾದೇವಿ, ಸುನಂದಾದೇವಿಯರನ್ನು ಲೋಕಪೂಜ್ಯ ಸ್ಥಾನದಲ್ಲಿಯೂ ನಿಯಮಿಸಿದನು. ತನ್ನ ಮಿತ್ರರಾದ ಪದ್ಮಾಸ್ಯನೇ ಮೊದಲಾದವರಿಗೆ ಅವರವರ ಯೋಗ್ಯತೆಗೆ ತಕ್ಕುದಾದ ಅಧಿಕಾರಗಳನ್ನು ಕೊಟ್ಟು ಧರ್ಮದಿಂದ ರಾಜ್ಯವನ್ನು ಆಳತೊಡಗಿದನು.

ಕಾಷ್ಠಾಂಗಾರನ ಕ್ರೂರ ಆಳಿಕೆಯಿಂದ ಪ್ರಜೆಗಳು ಸೋತು ಸುಣ್ಣವಾಗಿದ್ದರು. ಅವರು ಮತ್ತೆ ಪೂರ್ವಸ್ಥಿತಿಯನ್ನು ಹೊಂದಲನುಕೂಲವಾಗುವಂತೆ ಹನ್ನೆರಡು ವರ್ಷ ಪರಿಯಂತ ಕಂದಾಯವಿಲ್ಲದೆ ಅವರವರ ಆಸ್ತಿಯನ್ನು ಅನುಭವಿಸುವಂತೆ ಅಪ್ಪಣೆ ಕೊಟ್ಟನು. ಪದ್ಮಾದೇವಿಯೇ ಮೊದಲಾದ ತನ್ನ ಪತ್ನಿಯರನ್ನು ಆದರದಿಂದ ಅರಮನೆಗೆ ಕರೆಯಿಸಿಕೊಂಡನು. ದೇವ ಪಿತೃ ಪೂಜೆಗೆ ಎಂದೂ ತಪ್ಪಲಿಲ್ಲ. ತನ್ನ ಅಷ್ಟಮಹಿಷಿಯರ ಇಷ್ಟಕ್ಕೆ ಒಂದಿಷ್ಟೂ ಕೊರತೆಯಾಗ ಬಿಡಲಿಲ್ಲ.

ಜೀವಂಧರ ಮಹಾರಾಜನಿಗೆ ಪ್ರಜೆಗಳ ಹಿತಾಹಿತಗಳೇ ತನ್ನ ಹಿತಾಹಿತಗಳಾಗಿದ್ದುವು. ಅವರನ್ನು ಮಕ್ಕಳಂತೆ ಕಾಣುತ್ತಿದ್ದನು. ಅವರ ಸಂಪತ್ಸಮೃದ್ಧಿಯಿಂದ ಆನಂದಗೊಳ್ಳುತ್ತಿದ್ದನು. ದೇಶದೊಳಗಿರುವ ಶತ್ರು ಮಿತ್ರ ಉದಾಸೀನರ ಹೃದ್ಗತವನ್ನು ಗೂಢಚಾರರಿಂದ ತಿಳಿದು ಅದಕ್ಕೆ ತಕ್ಕಂತೆ ಎಚ್ಚರಿಕೆಯಿಂದ ಪ್ರಜಾಪಾಲನ ಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ಅವನ ಅನುದಿನದ ಪ್ರತಿಯೊಂದು ಕಾರ್ಯಕ್ಕೂ ಕಾಲಕ್ಲಪ್ತಿಯಿತ್ತು. ಹೀಗೆ ನಿಯಮಕ್ಕೊಳಗಾಗಿ ನಡೆಯುವ ಅವನ ಆಳಿಕೆಯು ಅದೊಂದು ಕಠಿಣ ತಪಸ್ಸಿಗೆ ಸಮಾನವಾಗಿತ್ತು. ವಿವೇಕಿಯಾದ ಜೀವಂಧರನು ಸಮಸ್ತ ಭೂಮಂಡಲವನ್ನು ಒಂದೇ ಪಟ್ಟಣದಂತೆ ತಿಳಿದು ಧರ್ಮದಿಂದಲೂ ಶೌರ್ಯದಿಂದಲೂ ಆಳುತ್ತಿದ್ದನು. ಇವನ ಈ ಧರ್ಮದಾಳಿಕೆಯಿಂದ ಭೂಮಿಯು ರಾಜನ್ವತಿಯಾದಳು. ಧನಧಾನ್ಯಸಂಪತ್ಸಮೃದ್ಧಿಯಿಂದ ಈಕೆಗೆ ವಸುಂಧರೆಯೆಂಬ ಹೆಸರು ಸಾರ್ಥಕವಾಯಿತು. ಪ್ರಜೆಗಳೆಲ್ಲರೂ ಅತ್ಯಂತ ಸುಖಿಗಳಾದರು. ಜೀವಂಧರನು ಸಾರ್ವಭೌಮನಾಗಿ ಮೆರೆದನು.

ವಿಜಯಾಮಹಾದೇವಿಯು ಮಗನ ಈ ಏಳಿಗೆಯನ್ನು ಕಣ್ತುಂಬ ಕಂಡಳು. ತಾನು ಕೃತಕೃತ್ಯೆಯಾದೆನೆಂದು ಭಾವಿಸಿದಳು. ತನ್ನಲ್ಲೇ "ಪಡೆದ ಮಗನು-ವಿವೇಕದಲ್ಲಿ, ಧರ್ಮದಲ್ಲಿ, ಶೌರ್ಯದಲ್ಲಿ, ಅಪ್ರತಿಮನೆನಿಸಿದುದನ್ನು ನೋಡಿದೆನು. ಶತ್ರುಹಸ್ತಗತವಾಗಿದ್ದ ತಂದೆಯ ರಾಜ್ಯವನ್ನು ಪುನಃ ಪಡೆದುದನ್ನು ಕಂಡೆನು. ಸಾರ್ವಭೌಮನೆನಿಸಿ ಮೆರೆಯುವುದನ್ನು ಈಕ್ಷಿಸಿದೆನು. ಪೂರ್ವದಲ್ಲಿ ಉಪಕಾರ ಮಾಡಿದವರಿಗೆಲ್ಲ ತನ್ನಿಂದ ಯಥೋಚಿತವಾಗಿ ಪ್ರತ್ಯುಪಕಾರಗಳು ಸಂದುವು. ಅನುಭವಿಸಬೇಕಾದ ಸಕಲ ಸುಖದುಃಖಗಳನ್ನೂ ಅನುಭವಿಸಿಯಾಯಿತು. ಇನ್ನು ಈ ಆಧಿವ್ಯಾಧಿ ದುಃಖಹೇತುವಾದ ಸಂಸಾರಸಂಬಂಧವು ನನಗೆ ಉಚಿತವಲ್ಲ. "ಜ್ಞಾತ್ವಾಪಿ ಕುಂಡಪಾತೋಯಂ ಕುತ್ಸಿತಾನಾಂ ಹಿ ಚೇಷ್ಟಿತಂ" ತಿಳಿದೂ ತಿಳಿದೂ ಬೆಂಕಿಯ ಹೊಂಡದಲ್ಲಿ ಬೀಳುವವರು ಮೂಢರಲ್ಲವೇ? ನನಗೆ ಶಾಸ್ತ್ರವೇ ಪ್ರಮಾಣ. ಆದುದರಿಂದ ಅದರಲ್ಲಿ ಹೇಳಿದಂತೆ ಪುತ್ರವಾತ್ಸಲ್ಯವನ್ನು

ತೊರೆದು ತಪಸ್ಸನ್ನಾಚರಿಸುವೆನು" ಎಂದು ಭಾವಿಸಿ ವೈರಾಗ್ಯವನ್ನು ಹೊಂದಿದಳು. ಇದನ್ನು ನೋಡಿ ಸುನಂದಾದೇವಿಯು ಈಕೆಯ ಮಾರ್ಗವನ್ನೇ ಅನುಸರಿಸಿದಳು. ತಾಯಂದಿರಿಬ್ಬರೂ ಹೀಗೆ ವಿರಕ್ತಿಯಿಂದ ದೀಕ್ಷಾಪ್ರಯತ್ನರಾದುದನ್ನು ನೋಡಿ ಜೀವಂಧರನು ಅತ್ಯಂತ ದುಃಖಕ್ಕೊಳಗಾದನು. ಆಗ ಆ ತಾಯಂದಿರು ಮಗನನ್ನು ಹೇಗೂ ಸಮಾಧಾನಗೊಳಿಸಿ ಆತನ ಸಮ್ಮತಿಯನ್ನು ಪಡೆದು ಶಾಸ್ತ್ರೋಕ್ತವಾಗಿ ಜಿನದೀಕ್ಷೆಯನ್ನು ಅಂಗೀಕರಿಸಲು ಸಿದ್ಧರಾದರು.

ಆರ್ಜಿಕೆಯರಲ್ಲಿ ಪ್ರಧಾನಳಾದ ಪದ್ಮೆಯೆಂಬವಳು ಇವರಿಗೆ ಜಿನದೀಕ್ಷೆಯನ್ನು ಕೊಟ್ಟಳು. ಮತ್ತು ಜಿನದೀಕ್ಷಾಬದ್ಧರಾದ ತಾಯಂದಿರಿಗಾಗಿ ಚಿಂತಿಸುತ್ತಿದ್ದ ಜೀವಂಧರನನ್ನು ಉದ್ದೇಶಿಸಿ ಈಕೆಯು "ಮಗುವೇ ಈ ಲೋಕದಲ್ಲಿ ಜಿನದೀಕ್ಷೆಯನ್ನು ಅಪೇಕ್ಷಿಸುವವರೇ ಅತಿ ದುರ್ಲಭರು. ಆದುದರಿಂದ ಆಸನ್ನಭವ್ಯರು ಜಿನದೀಕ್ಷೆಗೆ ಸಿದ್ಧರಾಗುತ್ತಿದ್ದರೆ ಅವರನ್ನು ತಡೆಯುವುದು ಪ್ರಾಜ್ಞರಿಗೆ ಉಚಿತವಲ್ಲ. "ನ ಹಿ ಖಾದಾ ಪತಂತೀ ಚೇದ್ರತ್ನವೃಷ್ಟಿರ್ನಿವಾರ್ಯತೇ" ರತ್ನದ ಮಳೆಯು ಸುರಿದರೆ ಅದನ್ನು ತಡೆಯುವುದೇ? ಅಂತೆಯೇ ನೀನು ವ್ಯಸನಪಡುವುದೂ ಉಚಿತವಲ್ಲ. ಯೌವನದಲ್ಲೇ ಈ ವೈರಾಗ್ಯವುಂಟಾಗುವುದು ಅತಿ ಶ್ಲಾಘ್ಯವು. ಆದರೆ ಅದು ಅತ್ಯಪೂರ್ವವಾದುದು. ಕೊನೆಯ ಪಕ್ಷ ಮುಪ್ಪಿನಲ್ಲಾದರೂ ಅವನ್ನು ಹೊಂದಬೇಕು. ಹಾಗೆ ಹೊಂದದೇ ಇದ್ದರೆ ಈ ಪರಮ ದುರ್ಲಭವಾದ ಮನುಷ್ಯದೇಹವನ್ನೇ ವ್ಯರ್ಥ ಮಾಡಿಕೊಂಡಂತಾಗುವುದು" ಎಂದು ಮುಂತಾಗಿ ತತ್ವಬೋಧೆಯನ್ನು ಮಾಡಿದಳು. ಜೀವಂಧರನು ಆರ್ಜಿಕೆಯ ಈ ಬೋಧನೆಯನ್ನು ಪಡೆದು ಮಾತಾವಿರಹ ದುಃಖವನ್ನು ತೊರೆದನು. ಆಕೆಗೆ ನಮಸ್ಕರಿಸಿ ವಿನೀತನಾಗಿ ತಾಯಂದಿರನ್ನಗಲಿ ಅರಮನೆಗೆ ಮರಳಿದನು. ಮೊದಲಿನಂತೆ ರಾಜ್ಯಪರಿಪಾಲನೆಯಲ್ಲಿ ಮನಸ್ಸಿಟ್ಟನು. ದೇವಭೋಗ ಸದೃಶವಾದ ಭೋಗವನ್ನನುಭವಿಸುತ್ತ ರಾಜ್ಯವಾಳಿದನು.

*+++++++++++*

## ಮುಕ್ತಿಶ್ರೀ

ಜೀವಂಧರನ ಧರ್ಮದಾಳಿಕೆಯು ಮೂವತ್ತು ಸಂವತ್ಸರಗಳ ಕಾಲ ಸಂತತವಾಗಿ ಸಾಗಿತು. ನಾಡೆಲ್ಲವೂ ಸಂಪತ್ಸಮೃದ್ಧವಾಯಿತು. ಪ್ರಜೆಗಳು ಸಂತಸದ ಕಡಲಲ್ಲಿ ತೇಲಾಡಿದರು. ಹೀಗಿರಲು ಒಮ್ಮೆ ವಸಂತಕಾಲದಲ್ಲಿ ಜೀವಂಧರನು ಅಷ್ಟಮಹಿಷಿಯರೊಡಗೂಡಿ ಜಲಕ್ರೀಡೆಗೆ ಹೋದನು. ಅಲ್ಲಿ ಬಹುಹೊತ್ತು ಜಲಕ್ರೀಡೆ ಯಾಡಿ ಉಂಟಾದ ಬಳಲಿಕೆಯನ್ನು ಕಳೆಯಲು ಸಮೀಪದ ಉದ್ಯಾನಕ್ಕೆ ಬಂದನು. ಅಲ್ಲಿ ಸಂಚರಿಸುತ್ತಿರುವಾಗ ಪಾಮರ ಜನಶ್ಲಾಘ್ಯಗಳಾದ ಕೆಲವು ಕಪಿಗಳ ಚೇಷ್ಟೆಗಳನ್ನು ಕಂಡನು.

ಒಂದು ಗಂಡು ಕಪಿಯು ತಾನು ಮತ್ತೊಂದು ಹೆಣ್ಣು ಕಪಿಯ ಬಳಿ ಸೇರಿದುದಕ್ಕೆ ಕೋಪಗೊಂಡಿರುವ ತನ್ನ ಹೆಣ್ಣು ಕಪಿಯನ್ನು ಸಮಾಧಾನಪಡಿಸಲು ಯತ್ನಿಸುತ್ತಿತ್ತು. ಏನು ಮಾಡಿದರೂ ಅದು ಸಮಾಧಾನ ಹೊಂದದಿರಲು ಕಪಟಿಯಾದ ಗಂಡು ಕಪಿಯು ಸತ್ತಂತೆ ನಟಿಸಿತು. ಆಗ ಹೆಣ್ಣು ಕಪಿಯು ಕೋಪವನ್ನು ಬಿಟ್ಟು, ಗಂಡು ಕಪಿಯನ್ನು ಎಬ್ಬಿಸಿ ಸಮಾಧಾನಗೊಳಿಸಿತು. ಬಳಿಕ ಎರಡೂ ತಂತಮ್ಮ ಕೋಪಗಳನ್ನು ಬಿಟ್ಟು ಮೊದಲಿನಂತೆ ಒಂದಾದುವು. ಗಂಡು ಕಪಿಯು ಹೆಣ್ಣನ್ನು ಮೆಚ್ಚಿ ಅದಕ್ಕೊಂದು ಹಲಸಿನ ಹಣ್ಣನ್ನು ತಂದು ಕೊಟ್ಟಿತು. ಹಣ್ಣನ್ನು ಕಸಿದುದು ಉದ್ಯಾನಪಾಲಕನಿಗೆ ತಿಳಿಯಿತು. ಅವನು ಧಾವಿಸಿ ಬಂದು ಗದರಿಸಿ, ಹೆಣ್ಣು ಕಪಿಯಿಂದ ಆ ಹಣ್ಣನ್ನು ಕಿತ್ತುಕೊಂಡನು. ಈ ಕೃತ್ಯಗಳೆಲ್ಲ ಜೀವಂಧರನ ಕಣ್ಣಿಗೆ ಬಿದ್ದುವು. ಆಸನ್ನ ಭವ್ಯರಿಗೆ ಅತ್ಯಲ್ಪ ವಿಷಯವಾದರೂ ಅದು ವೈರಾಗ್ಯಕ್ಕೆ ಕಾರಣವಾಗುತ್ತದಷ್ಟೆ! ಕಾಷ್ಠಾಂಗಾರನು ತನ್ನ ತಂದೆಯಿಂದ ರಾಜ್ಯವನ್ನಪಹರಿಸಿದುದು, ಅವನಿಂದ ತಾನದನ್ನು ಸೆಳೆದುಕೊಂಡದು ಇತ್ಯಾದಿ ಕಾರ್ಯಗಳಿಗೆ ಈ ಮರ್ಕಟ ಚೇಷ್ಟೆಯೊಂದು ಅಣಕವಾಗಿ ಜೀವಂಧರನಿಗೆ ತೋರಿತು. ರಾಜ್ಯಾದಿ ಐಹಿಕ ಸಂಪತ್ತಿನ ಅಸ್ಥಿರತೆಯನ್ನು ಭಾವಿಸಿದನು. ಆ ಚೇಷ್ಟೆಯಲ್ಲಿ ಆತನಿಗೆ ಜೀವನ ತತ್ವದ ಬೋಧೆಯಾಯಿತು. ವೈರಾಗ್ಯವು ಉತ್ಪನ್ನವಾಯಿತು. ತನ್ನಲ್ಲೇ ತತ್ವಜ್ಞಾನರೂಪವಾದ ದ್ವಾದಶಾನುಪ್ರೇಕ್ಷೆಗಳನ್ನು ಭಾವಿಸಿದನು. ಇದರಿಂದ ಆ ವೈರಾಗ್ಯವು ಮತ್ತಷ್ಟು ಸ್ಥಿರವಾಯಿತು. ರಾಜ್ಯವನ್ನು ತೃಣಕ್ಕೆ ಬಗೆದನು.

ಅರಮನೆಯನ್ನು ತ್ಯಜಿಸಿ ಜಿನಚೈತ್ಯಾಲಯಕ್ಕೆ ಬಂದನು. ಅರ್ಹತ್ಪರಮೇಶ್ವರನನ್ನು ಪೂಜಿಸಿದನು. ಯೋಗೀಂದ್ರರೊಬ್ಬರಿಂದ ಧರ್ಮಬೋಧೆಯನ್ನು ಪಡೆದನು. ಅದರಿಂದ ಮನಸ್ಸು ನಿರ್ಮಲವಾಯಿತು. ಬಳಿಕ ಪ್ರಥಮ ಚಾರಣ ಮುನಿಯೊಡನೆ ತನ್ನ ಪೂರ್ವ ಭವಾಳಿಯನ್ನು ವಿವರಿಸಬೇಕೆಂದು ವಿಜ್ಞಾಪಿಸಿಕೊಂಡನು.

ಆ ಮುನಿಯು ಜೀವಂಧರನಿಗೆ ಅದನ್ನು ವಿವರಿಸುತ್ತ "ಎಲೈ ರಾಜನೇ! ಹಿಂದೆ ಧಾತಕೀ ಷಂಡಕ್ಷೇತ್ರದಲ್ಲಿ ಭೂತಿಲಕವೆಂಬ ಒಂದು ಪಟ್ಟಣವಿತ್ತು. ಅಲ್ಲಿಗೆ ಪವನವೇಗನೆಂಬವನು ಅರಸನಾಗಿದ್ದನು. ಆತನಿಗೆ ನೀನು ಪೂರ್ವಭವದಲ್ಲಿ ಯಶೋಧರನೆಂಬ ಮಗನಾಗಿ ಜನಿಸಿದೆ. ಅಂದು ನೀನೊಮ್ಮೆ ಕ್ರೀಡಾರ್ಥವಾಗಿ ರಾಜಹಂಸದ ಮರಿಯೊಂದನ್ನು ಅದರ ಗೂಡಿನಿಂದ ತಂದು ಸಾಕಿ ಸಲಹಿದೆ. ಧರ್ಮಿಷ್ಠನಾದ ತಂದೆಯು ನಿನ್ನ ಈ ಕೃತ್ಯಕ್ಕೆ ಬೇಸರಗೊಂಡವನಾಗಿ ನಿನಗೆ ಧರ್ಮಬೋಧೆಯನ್ನು ಮಾಡಿದನು. ಆ ಉಪದೇಶದಿಂದ ನೀನೂ ಧರ್ಮಿಷ್ಠನಾದೆ. ತಂದೆಯು ನಿರ್ಬಂಧವನ್ನು ಮನ್ನಿಸದೆ ವೈರಾಗ್ಯವನ್ನು ಹೊಂದಿ ಆಷ್ಟಮಹಿಷಿಯರೊಡನೆ ಜಿನದೀಕ್ಷೆಯನ್ನಂಗೀಕರಿಸಿ ದಿಗಂಬರ ಮುನಿಯಾದೆ. ಮತ್ತೆ ಆ ಯಶೋಧರ ಭವವನ್ನು ಕಳೆದು ಈ ರಾಜಪುರೀ ಪಟ್ಟಣದಲ್ಲಿ ಭವ್ಯಶ್ರೇಷ್ಠನಾಗಿ ಈಗ ಜನಿಸಿರುವಿ. ನೀನು ಪೂರ್ವಭವದಲ್ಲಿ ಆ ಹಂಸಪಕ್ಷಿಯ ಮರಿಯನ್ನು ಅದರ ಮಾತಾಪಿತೃಗಳಿಂದ ಅಗಲಿಸಿ ಅದರ ಸ್ಥಾನವನ್ನು ತಪ್ಪಿಸಿ, ಪಂಜರದಲ್ಲಿಟ್ಟು ಹದಿನಾರು ದಿವಸಗಳ ವರೆಗೆ ಬಂಧಿಸಿ ಕಾಡಿದುದರಿಂದ ಈ ಜನ್ಮದಲ್ಲಿ ನಿನಗೆ ಹದಿನಾರು ಸಂವತ್ಸರಗಳ ಕಾಲ ಮಾತಾಪಿತೃವಿಯೋಗವೂ ರಾಜ್ಯಭ್ರಷ್ಟತೆಯೂ ಪ್ರಾಪ್ತವಾಯಿತು" ಎಂದು ಪೂರ್ವಜನ್ಮ ವೃತ್ತಾಂತವನ್ನು ವಿವರಿಸಿದನು.

ಈ ಉಪದೇಶದಿಂದ ಜೀವಂಧರನು ಸರ್ಪವು ಸಿಡಿಲಿಗಂಜುವಂತೆ ರಾಜ್ಯಕ್ಕೆ ಹೆದರೆದನು. ಮುನಿಗೆ ನಮಸ್ಕರಿಸಿ ಪಟ್ಟಣಕ್ಕೆ ಹಿಂತಿರುಗಿದನು. ಚಾರಣ ಮುನಿಯ ಉಪದೇಶವನ್ನು ಬಂಧುಮಿತ್ರರಿಗೆ ತಿಳಿಸಿ

ದನು. ಅವರು ಇದನ್ನು ಕೇಳಿ ವಿಷಯಸುಖವನ್ನು ವಿಷಕ್ಕೆ ಸಮಾನ ವಾಗಿ ಭಾವಿಸಿದರು.

ಜೀವಂಧರನ ಮನಸ್ಸು ವೈರಾಗ್ಯದಲ್ಲಿ ನೆಲೆವಡೆದುದರಿಂದ ರಾಜ್ಯಾದಿ ವಿಷಯಗಳಲ್ಲಿ ಅನಾಶಕ್ತಿಯನ್ನು ತಳೆಯಿತು. ಒಡನೆ ತನ್ನ ಮುಖ್ಯ ಪಟ್ಟಮಹಿಷಿಯಾದ ಗಂಧರ್ವದತ್ತೆಯಲ್ಲಿ ಜನಿಸಿದ ಸತ್ಯಂಧರನಿಗೆ ರಾಜ್ಯ ಭಾರವನ್ನೊಪ್ಪಿಸಿದನು. ಅಷ್ಟಮಹಿಷಿಯರೊಡನೆ ಶ್ರೀ ವರ್ಧಮಾನ ಸ್ವಾಮಿಯ ಸಮವಸರಣವನ್ನು ಕುರಿತು ಪ್ರಮಾಣ ಮಾಡಿದನು. ಅಲ್ಲಿ ವರ್ಧಮಾನಸ್ವಾಮಿಯನ್ನು ವಿಧ್ಯುಕ್ತವಾಗಿ ಪೂಜಿಸಿ ಈ ಪ್ರಕಾರ ಸ್ತುತಿಸಿದನುಃ-

ಭಗವನ್ ಭವರೋಗೇಣ ಭೀತೋ ಹಂ ಪೀಡಿತಸ್ಸದಾ ।
ತ್ವಯ್ಯಕಾರಣ ವೈದ್ಯೇಪಿ ಸಹ್ಯಾ ಕಿಂತೇ ಪ್ರವೇದನಾ ॥
ತ್ವಂ ಸಾರ್ವ: ಸರ್ವವಿದ್ದೇವ ಸರ್ವಕರ್ಮಣಿ ಕರ್ಮಠ: ।
ಭವ್ಯಶ್ಚಾಹಂ ಕುತೋವಾಮೇ ಭವರೋಗೊ ನಶಾಮ್ಯತಿ ॥

ನಿರ್ಮೋಹ ಮೋಹದಾವೇನ ದೇಹ ಜೀರ್ಣೋರುಕಾನನೇ ।
ದಹ್ಯಮಾನತಯಾ ಶಶ್ವಸ್ಮಹ್ಯಂತಂ ರಕ್ಷರಕ್ಷಮಾವ್ ॥

ಸಂಸಾರ ವಿಷವೃಕ್ಷಸ್ಯ ಸರ್ವಾಪತ್ಫಲ ದಾಯಿನ: ।
ಅಂಕುರಂ ರಾಗಮುನ್ಮೂಲಂ ವೀತರಾಗ ವಿದೇಹಿ ಮೇ ॥

ಕರ್ಣಧಾರ ಭವಾರ್ಣೋಧೇಃ ಮಧ್ಯತೋ ಮಜ್ಜತಾ ಮಯಾ ।
ಕೃಛ್ರೇಣ ಬೋಧಿನೌರ್ಲಬ್ಧಾ ಭೂಯಾನ್ನಿರ್ವಾಣ ಪಾರಗಾ ॥

ಹೀಗೆ ವರ್ಧಮಾನ ಸ್ವಾಮಿಯನ್ನು ಸ್ತುತಿಸಿ, ಜಿನದೀಕ್ಷೆಯನ್ನು ಪಡೆದನು. ಗಣಧರರಿಗೆ ನಮಸ್ಕರಿಸಿದನು, ಅಷ್ಟಕರ್ಮಕ್ಷಯಕಾರಕವಾದ ತಪಸ್ಸನ್ನು ಆರಂಭಿಸಿದನು. ರತ್ನತ್ರಯದ ಪೂರ್ತಿಯಿಂದ ತಪಸ್ಸನ್ನಾಚರಿಸಿ ಸಕಲ ಕರ್ಮಕ್ಷಯವನ್ನು ಹೊಂದಿ ಸಿದ್ಧಾಷ್ಟಗುಣಭಾಗಿಯಾದನು. ಕೊನೆಗೆ ಸಂಸಾರಬಂಧರಹಿತನಾಗಿ, ನಿರಾವರಣನಾಗಿ, ನಿರ್ಮಲನಾಗಿ ನಿತ್ಯನಿರತಿಶಯ ಸುಖಸ್ವರೂಪವಾದ ನಾಶರಹಿತವಾದ ಮುಕ್ತಿಶ್ರೀಯನ್ನು ಪಡೆದನು.

ಈ ಕ್ಷತ್ರಿಯಚೂಡಾಮಣಿಯಾದ ಜೀವಂಧರನ ದಿವ್ಯ ಜೀವನ ಚರಿತೆಯು ಮುಮುಕ್ಷುಗಳಿಗೆ ಜ್ಯೋತಿರ್ಮಣಿಯಂತೆ ಮಾರ್ಗದರ್ಶಕವಾಗಲೆಂದು ಗೀರ್ವಾಣಭಾಷಾ ಕವಿಪುಂಗವನಾದ "ವಾದೀಭಸಿಂಹ ಸೂರಿ"ಯು 'ಕ್ಷತ್ರಚೂಡಾಮಣಿ' ಎಂಬ ಸಂಸ್ಕೃತ ಕಾವ್ಯರತ್ನವನ್ನು ಲೋಕಕ್ಕೊಪ್ಪಿಸಿದ್ದನು. ಅದರ ಕಿಂಚಿತ್ ಪ್ರಭೆಯು ಆ ಸಂಸ್ಕೃತ ಕಾವ್ಯದ ಸಂಗ್ರಹಾನುವಾದ ರೂಪವಾದ ಈ ಕನ್ನಡ ಕೃತಿಯಿಂದ ಕರ್ನಾಟಕದ ಜನಸಾಮಾನ್ಯಕ್ಕೂ ದೊರೆಯಲಿ.

+++++++++++++




ಶ್ರೀಮಹಾವೀರ ಮುದ್ರಣಾಲಯ ೬೧೬ ಮಠಗಲ್ಲಿ, ಬೆಳಗಾಂವ.

